ಬೆಲೆ: ಎರಡು ಆಣೆ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವವು.

# ಕರ್ಮವೀರ

KARMAVEER
WEEKLY
HUBLI
NOV. 18
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ.

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೧೮ — ೧೧ — ೧೯೪೬ [ ಸಂಚಿಕೆ ೩೦.

# ರಶಿಯಾ ಮುಂದಿನ ಯುದ್ಧವನ್ನು ಜಯಿಸಬಹುದು

## ಜಾಗತಿಕ ಶಾಂತಿಯ ಬಗ್ಗೆ ಅಮೇರಿಕೆಯ ಹೊಣೆಯೇನು ? ರಶಿಯದ ಸಂಗಡ ಶಾಂತಿ-ಮೈತ್ರಿ ಇನ್ನೂ ಸಾಧ್ಯ;

### ಯುದ್ಧವು ಎಲ್ಲರಿಗೂ ಗಂಡಾಂತರದ್ದು

ಹೆನ್ರಿ ಸ್ಟೀಲೆ ಕೋಮಾಗರಿಂದ

ಇವರು ಅಮೇರಿಕೆಯ ಪ್ರಮುಖ ಇತಿಹಾಸಕಾರರಲ್ಲಿ ಒಬ್ಬರಾಗಿದ್ದಾರಲ್ಲದೆ ಕೋಲಂಬಿಯಾ ವಿಶ್ವವಿದ್ಯಾಲಯದಲ್ಲಿ ಇತಿಹಾಸದ ಪ್ರಾಧ್ಯಾಪಕರಿರುವರು. ಮತ್ತು 'ಅಮೇರಿಕನ್ ಸ್ಕಾಲರ' ಪತ್ರಿಕೆಯ ಸಹಸಂಪಾದಕರೂ ಎಷ್ಟೋ ಅಮೇರಿಕನ್ ಇತಿಹಾಸ ಪುಸ್ತಕಗಳ ಕರ್ತರೂ ಇದ್ದಾರೆ.

ರಶಿಯಾ ಅಮೇರಿಕಾಗಳೆರಡೂ ನಿಶ್ಚಿತವಾಗಿಯೂ ಯುದ್ಧದ ಕಡೆಗೆ ನುಗ್ಗುತ್ತಲಿವೆ. ಸಾಮಾನ್ಯವಾಗಿ ಅಮೇರಿಕೆಯ ಪ್ರತಿಯೊಬ್ಬ ನಾಗರಿಕನೂ ಇದನ್ನು ಒಪ್ಪುತ್ತಾನೆ. ಯಾವದೋ ಶಕ್ತಿಯು ಈ ಎರಡೂ ರಾಷ್ಟ್ರಗಳನ್ನು ಅನಿವಾರ್ಯವಾಗಿ ತಿಕ್ಕಾಟದ ಕಡೆಗೆ ಸೆಳೆಯುತ್ತಲಿದೆಯೆಂಬುದನ್ನು ಅವರು ಬಲ್ಲರು. ಆದಾಗ್ಯೂ ಅದು ಯಾವುದು ಅಥವಾ ಇದು ಹೀಗೇಕಾಗಬೇಕೆಂಬದನ್ನು ತಿಳಿದುಕೊಳ್ಳಲು ಅವರು ಅಸಮರ್ಥರಾಗಿದ್ದಾರೆ.

ಈ ಲೇಖವು ಮೊದಲು ಈಗ ರೂಪಗೊಳ್ಳುತ್ತಿರುವ ತಿಕ್ಕಾಟದ ಮೂಲ ಮುದ್ದೆಗಳನ್ನು ತೋರಿಸುವದಲ್ಲದೆ ಮಹತ್ವದ ಚಲನವಲನಗಳನ್ನು ಬೈಲಿಗೆಳೆದು ನ್ಯಾಯ್ಯವಾದದ್ದನ್ನು ಮುಂದಿಡುವದು ಹಾಗೂ ಇಂಥ ಪ್ರಸಂಗದಲ್ಲಿ ಎರಡೂ ರಾಷ್ಟ್ರಗಳು ಮುಂದೆ ಯಾವ ರೀತಿಯಲ್ಲಿ ಕಾರ್ಯವನ್ನು ಸಾಗಿಸಿಕೊಂಡು ಹೋಗಬೇಕೆಂಬುದನ್ನು ಹೇಳುತ್ತದೆ. ಇದರಲ್ಲಿ ಸತ್ಯಸಂಗತಿ ಹಾಗೂ ಪರಿಣಾಮಗಳನ್ನು ಸೂಚಿಸಿ ರಶಿಯವೇ ಏಕೆ ಗೆಲ್ಲಬಹುದೆಂಬುದಕ್ಕೆ ತಕ್ಕ ಕಾರಣಗಳನ್ನು ತೋರಿಸುತ್ತೇವೆ. ಆದಕಾರಣ ಯುದ್ಧವನ್ನು ತಡೆಯುವದರ ಸಲುವಾಗಿ ಏನು ಮಾಡಬೇಕೆಂಬದನ್ನು ಚರ್ಚಿಸಿ, ಕಡೆಗೆ ಎರಡು ಉಪಯುಕ್ತ ಸೂಚನೆಗಳನ್ನು ಮಾಡಿದ್ದಾಗಿದೆ.

### ಸೋವ್ಹಿಯಟ್ ಬಣ

ಜಗತ್ತಿನಲ್ಲೆಲ್ಲ ರಶಿಯನ್ ಹಾಗೂ ಅಮೇರಿಕನ್ ವಿಚಾರಗಳ ದ್ವಂದ್ವವು ಹೇಗೆ ಸಾಗಿದೆಯೆಂಬುದನ್ನು ದಿನಾಲು ಪತ್ರಿಕೆಗಳಲ್ಲಿ ಬರುತ್ತಿರುವ ಸಂಗತಿಗಳಿಂದ ಯಾವನಾದರೂ ಅರಿತುಕೊಳ್ಳಬಹುದು. ಎಷ್ಟೋ ಅಮೇರಿಕನ್ನರು ಈಗ ಅತಿ ರಭಸದಿಂದ ರೂಪುಗೊಳ್ಳುತ್ತಿರುವ ರಶಿಯನ ಬಣದ ವಿರುದ್ಧ ಪಾಶ್ಚಿಮಾತ್ಯ ಪ್ರಜಾಸತ್ತಾತ್ಮಕ ಬಣವೊಂದನ್ನು ತೀವ್ರವಾಗಿ ಕಟ್ಟಲು ಒತ್ತಾಯ ಮಾಡಹತ್ತಿದ್ದಾರೆ. ಈ 'ಎರಡು ಜಗತ್ತಿ'ನ ವಿಚಾರವು ಸಾವಕಾಶವಾಗಿ ಹಾಗೂ ಗುಪ್ತ ರೀತಿಯಲ್ಲಿ ಯುದ್ಧ ಕಾಲದಲ್ಲಿದ್ದ 'ಒಂದೇ ಜಗತ್ತಿ'ನ ಸ್ಥಾನವನ್ನು ಅಕ್ರಮಿಸತೊಡಗಿದೆ. ರಶಿಯವು ಸಂಯುಕ್ತ ರಾಷ್ಟ್ರಗಳ ನೀತಿ ಹಾಗೂ ಶಬ್ದಗಳ ವಿರುದ್ಧವಾಗಿ ಮತ್ತು ದ್ವೇಷಪೂರ್ವಕವಾಗಿಯೇ ಯುರಾಸಿಯನ್ ಗುಂಪನ್ನು ಅಭಿಯೋಗದ ಸಲುವಾಗಿಯೇ (ಹೊರ್ತು ಸಂರಕ್ಷಣೆಗಾಗಿ ಅಲ್ಲ) ಸಂಘಟಿಸುತ್ತಲಿದೆ. ಈ ಗುಂಪು ಟ್ರೈಸ್ಟಿಯನ್ನು ಮುಟ್ಟುವ 'ಕಬ್ಬಿಣ ಪರದೆ'ಯಿಂದ ಸ್ಟೆಟಿನ್ ಹಾಗೂ ಪೂರ್ವಕ್ಕೆ ಕುರಿಲ್ಸದ ವರೆಗೆ ಹಬ್ಬುತ್ತದೆ. ಇದು ಎಷ್ಟು ವಿಶಾಲವಿದ್ದರೂ ರಶಿಯ ಇಷ್ಟರಿಂದದಿಲೇ ತೃಪ್ತಿ ಬಡದೆ ಇನ್ನೂ ಬೆಳೆಸುವದರ ಸಲುವಾಗಿ ಭಗೀರಥ ಪ್ರಯತ್ನ ಮಾಡುತ್ತಲಿದೆ. ರಶಿಯದ ಈ ಯೋಜನೆಗಳು ಫಲಿಸಿದರೆ—ಆಫ್ರಿಕೆಯ ಕೆಲವು ಭಾಗ, ಇರಾಣ, ಇರಾಕ, ಕೆಲವೊಂದು ಸಮಯಕ್ಕೆ ಹಿಂದುಸ್ತಾನದ ಉತ್ತರ ಪ್ರಾಂತಗಳು ಹಾಗೂ ಒಂದು ವೇಳೆಗೆ ಪೂರ್ಣ ಚೀನ ಮೊದಲಾದವುಗಳೆಲ್ಲ ಅದರ ಅಧೀನವಾಗಬಹುದು. ಆ ಮೇಲೆ ರಶಿಯವು ತನ್ನ ಅಂಕಿತದಲ್ಲಿರುವ ಜಗತ್ತಿನ ಒಂದು ಮೂರಾಂಶದಷ್ಟು ಭೂಮಿಯಿಂದ ಅರ್ಧದಷ್ಟು ಜನಸಂಖ್ಯೆಯಿಂದ ಪಶ್ಚಿಮದೆಡೆಗೆ ಅಟ್ಲಾಂಟಿಕ, ಲ್ಯಾಟಿನ್, ಅಮೇರಿಕಾ, ಮೊದಲಾದವುಗಳನ್ನು ಹೊಕ್ಕು ಬ್ರಿಟನ್ ಹಾಗೂ ಅಮೇರಿಕಾಗಳನ್ನು ತನ್ನ ಕಮ್ಯುನಿಸ್ಟ ಬಲದಿಂದ ಮುತ್ತಿ ನಂತರ ಒತ್ತಾಯದಿಂದ ಅವನ್ನು ತನ್ನ ಕಕ್ಷೆಯಲ್ಲಿ ಇರಿಸಲು ಪ್ರಯತ್ನಿಸುವದು. ಇಂಥ ವಿಚಾರಗಳು ಹಿಂದಿನ ರಾಯಭಾರಿಯಾದ ಬುಲಿಟ್‌ನನ್ನು ಮಾತ್ರವಲ್ಲ ನ್ಯಾಯಬುದ್ಧಿಯ ನಿರೀಕ್ಷಕನಾದ ವಾಲ್ಟರ ಲಿಪ್‌ಮನ್‌ನನ್ನು ಕೂಡ ಕನಸಿನಲ್ಲಿಯೂ ಪೀಡಿಸುತ್ತಿವೆ. ಯಾಕಂದರೆ ಜಗತ್ತಿನಲ್ಲಿಯ ಯಾವದೇ ರಾಷ್ಟ್ರವು ರಶಿಯದ ಈ ಮುನ್ನಡೆಯನ್ನು ತಡೆಗಟ್ಟಲಾರದು. ಇಲ್ಲವೆ ಅದರ ಅಭಿಯೋಗ ಪಥವನ್ನು ಬದಲಿಸಲಾರದು. ಇಂಥ ರಶಿಯನ್ ಬಣಕ್ಕೆ ನಿಜವಾದ ಮದ್ದೆಂದರೆ ಅಂಗ್ಲೋ-ಅಮೇರಿಕನ್ ಬಣ. ಆದಕಾರಣ ಕೈಮೀರುವ ಮೊದಲೇ ಅಂಥ ಬಣವನ್ನು ನಿರ್ಮಿಸಲು ಅವರು ಹೇಳುತಿದ್ದಾರೆ. ಸದ್ಯಕ್ಕೆ ನಮ್ಮಲ್ಲಿ ಅಟಂಬಾಂಬು ಔದ್ಯೋಗಿಕ ಕಾರ್ಖಾನೆಗಳೂ ನಾವಿಕ ಹಾಗು ವಿಮಾನ ದಳದ ಮೇಲ್ಮೆಯೂ ನಿಪುಣರಾದ ಯಂತ್ರಜ್ಞರೂ ವಿಜಯಪತಾಕೆಯ ಜೊತೆಗೆ ಸಮರ್ಥ ನಾಯಕಗಣವೂ ಇರುತ್ತದೆ. ಇವೆಲ್ಲವುಗಳ ಬಲದಿಂದ ನಾವು ಪ್ರಜಾಸತ್ತಾತ್ಮಕ ಹಾಗು ಸ್ವಾತಂತ್ರ್ಯಪ್ರಿಯ ರಾಷ್ಟ್ರಗಳನ್ನು ಒಂದೆಡೆಗೆ ಸೇರಿಸಿ ಗುಂಪುಗಟ್ಟಿ ಅದನ್ನು ಅಜಿಂಕ್ಯವಾದದ್ದನ್ನಾಗಿ ಮಾಡಬೇಕು.

### ವಿರೋಧಿ ಬಣ

ಈ ಪಾಶ್ಚಿಮಾತ್ಯ ಬಣದಲ್ಲಿ ಯಾವ ಯಾವ ರಾಷ್ಟ್ರಗಳನ್ನು ಸೇರಿಸಬೇಕೆಂಬದು ಸ್ಪಷ್ಟವಿಲ್ಲ. ಸದ್ಯಕ್ಕೆ ಆಂಗ್ಲಭಾಷೆಯನ್ನಾಡುವ ಜನರು ಅಂದರೆ ಸಂಯುಕ್ತ ಸಂಸ್ಥಾನ (ಅಮೇರಿಕಾ) ಬ್ರಿಟನ್ ಹಾಗೂ ಅದರ ಅಧೀನ ರಾಷ್ಟ್ರಗಳು ಇದರಂತೆ ಪಶ್ಚಿಮ ಯುರೋಪ, ಇಟಲಿ, ಸ್ಕ್ಯಾಂಡಿನೇವ್ಹಿಯಾ, ಶಕ್ಯವಾದಲ್ಲಿ ಐಬೇರಿಯನ್ ಅರ್ಧದ್ವೀಪವನ್ನಾದರೂ ಸೇರಿಸಿಕೊಳ್ಳಬೇಕು. ಅಮೇರಿಕಾ ಗಾಳೀ ಪಟದ ಜೊತೆಗೆ ಅದರ ಬಾಲವಾದ ಲ್ಯಾಟಿನ್ ಅಮೇರಿಕೆಯೂ ಬರಬೇಕಾಗುವದು. ಜಪಾನವನ್ನು ಪ್ರಜಾಸತ್ತಾತ್ಮಕವನ್ನಾಗಿ ಮಾಡಬೇಕಾಗಬಹುದು. ಹಾಗೂ ರಾಷ್ಟ್ರೀಯ ಚೀನವನ್ನು ಪೂರ್ವದಲ್ಲಿ ರಶಿಯದ ಹಬ್ಬುನೆಗೆ ಆತಂಕವನ್ನಾಗಿರಿಸಬೇಕಾಗಬಹುದು. ಇದಕ್ಕಾಗಿ ಹಲವು ಯೋಜನೆಗಳನ್ನು ಪ್ರತಿಪಾದಿಸಲಾಗಿದೆ. ಆದರೆ ಇಂಥ ಯೋಜನೆಗಳು ಭೀಕರವಾದದುವು. ಸಾಮಾನ್ಯ ನೀತಿಮತ್ತೆಗೆ ವಿರೋಧಿಯಾಗಿರುವ ಇವುಗಳ ಫಲವು ಜಾಗತಿಕ ಯುದ್ಧವಲ್ಲದೆ—ಚಿರಶಾಂತಿಯಲ್ಲ! ಕಮ್ಯೂನಿಸ್ಟ ಬಣಕ್ಕಿಂತಲೂ ಹೆಚ್ಚಿನ ಸಂರಕ್ಷಣೆಯು ಪ್ರಜಾತಂತ್ರ ಬಣಕ್ಕಾದರೂ ಅತ್ಯಾಧುನಿಕ ವೈಜ್ಞಾನಿಕ ಯುದ್ಧಸಲಕರಣೆಗಳಿಂದ ಸಿಗಲಾರದು ಮತ್ತು ಸಂರಕ್ಷಣೆಯ ಹೊಣೆಯನ್ನು ಹೊತ್ತ ಯಾವ ಮಿತ್ರರಾಷ್ಟ್ರಗಳೂ ಬ್ರಿಟನವನ್ನು ರಾಕೆಟ್ ಅಟಂ ಬಾಂಬಗಳ ಹೊಡೆತದಿಂದ ರಕ್ಷಿಸಲಾರವು. ಅದರಂತೆ ಆರ್ಕಟಿಕದಿಂದ ಅಮೇರಿಕೆಯ ಮೇಲಿನ ದಾಳಿಯನ್ನು ಎದುರಿಸಲಾರವು. ಅಮೇರಿಕೆಯ ತಲೆತಿನ್ನುತ್ತಿರುವ ಯಾವದೆ ಯೋಜನೆಯು ಮೂಲಭೂತವಾದ ಶಾಶ್ವತ ಶಾಂತಿಯನ್ನು ಪ್ರಸ್ಥಾಪಿಸುವದರ ಬದಲು ಅದನ್ನು ವಿಚಾರವಿಲ್ಲದೆ ನಾಶಮಾಡತೊಡಗಿದೆ. ಈ ಬಣಗಳ ಯೋಜನೆಯು ಹಳೆಯ ಶಕ್ತಿ ಸಮತೋಲನೆಯ ಹೊಸ ಮಾದರಿ ಎನ್ನಬಹುದು. ಈ ಶಕ್ತಿ ಸಮತೋಲನೆಯ ಮಾದರಿಯನ್ನು ನಾವು ಯಾವಾಗಿನಿಂದಲೂ ತಪ್ಪಾಗಿರುವದೆಂದೂ ಗಂಡಾಂತರದ್ದಿರುವದೆಂದೂ ಪರಿಗಣಿಸಿದ್ದೇವೆ. ಕಾರಣ ಅದನ್ನು ನಾವು ರಾಜಕಾರಣ ಅಥವಾ ಮನಸ್ಸಿನಲ್ಲಿಯಾದರೂ ತರಕೂಡದು.

### ಇದು ಸಾಧ್ಯವೇ?

ಜಗತ್ತನ್ನು ದ್ವಿಭಾಗಿಸುವ ಈ ವಿಚಾರಕ್ಕೆ ಇಂಥ ಮತ್ತು ಬೇರೆ ತರದ ಅಡೆತಡೆಗಳು ತಲೆದೋರಬಹುದು. ಆದರೆ ಇವೆಲ್ಲವುಗಳು ಗೊತ್ತಿದ್ದವುಗಳೇ. ಆದರೆ ಮೊದಲನೆಯ ಆತಂಕವು ಎಲ್ಲವುಗಳನ್ನು ಮೀರುತ್ತದೆ. ಅದೆಂದರೆ ರಶಿಯವು ತನ್ನದೇ ಆದ ಬಣವನ್ನು ಕಟ್ಟಿದ ಮೇಲೆ ಬ್ರಿಟನ್-ಅಮೇರಿಕೆ ಎರಡು ವಿರೋಧಿ ಬಣಗಳನ್ನು ಒಂದುಗೂಡಿಸಿವೆಯೆಂದು ತಿಳಿದುಕೊಳ್ಳುವ ಕಾರಣವಿಲ್ಲ. ಈ ಬಣಗಳ ರಾಜಕಾರಣದ ಪರಿಣಾಮವನ್ನು ಚರ್ಚಿಸುವ ಪೂರ್ವದಲ್ಲಿ ಬಣಗಳನ್ನಾದರೂ ಮಾಡುವದು ಸಾಧ್ಯವೇನೆಂಬುದನ್ನು ವಿಚಾರಿಸುವಾ. ರಶಿಯವು ತನ್ನ ಬಣವನ್ನು ಮಧ್ಯಯುರೋಪಿನಲ್ಲಲ್ಲದೆ ಜಗದ್ವ್ಯಾಪಿಯಾಗಿ ಮಾಡಲೆತ್ನಿಸಬಹುದೇ ಇಲ್ಲವೆ ಹಾಗೆ ಮಾಡಿದ್ದೇ ಆದರೆ ಅದು ಯಶಸ್ವಿಯಾಗಬಹುದೇ ಎಂಬದನ್ನು ಯಾವ ಪರಕೀಯನೂ ನಿಶ್ಚಯಿಸಲಾರನು. ಆದರೆ ಅದು ಮಧ್ಯಯುರೋಪಿಯನ್ ಬಣವನ್ನು ಯಶಸ್ವಿಯಾಗಿ ನಿರ್ಮಿಸುತ್ತಿರುವದೆಂಬುದಕ್ಕೆ ಅನ ಶಂಕೆಯಿಲ್ಲ. ಪೋಲಂಡ, ರುಮಾನಿಯಾ, ಬಲ್ಗೇರಿಯಾ, ಯುಗೋಸ್ಲಾವಿಯಾ ಮತ್ತು ಅಲ್ಬೇನಿಯಾಗಳು ಈಗಾಗಲೇ ರಶಿಯದ ಅಧಿಕಾರದಲ್ಲಿವೆ. ಮುಂದೆ ಆಕೆ ಝೆಕೊಸ್ಲೋವಾಕಿಯಾ ಮತ್ತು ಹಂಗರಿಗಳನ್ನು ರಶಿಯದ ಬಣವನ್ನು ಸೇರುವಂತೆ ಮನವೊಲಿಸಬಹುದು. ಫಿನ್‌ಲಂಡವು ಸ್ವತಂತ್ರವಿಲ್ಲ. ಬ್ರಿಟಿಶ ಸತ್ತೆಯು ಇಲ್ಲದಾದ ಕೂಡಲೆ ಗ್ರೀಸವಾದರೂ ರಶಿಯನ ಬಣದಲ್ಲಿ ಬೀಳಬಹುದು. ಈಗಾಗಲೇ ಉತ್ತರ ಇರಾಣದಲ್ಲಿ ಅಂಗ್ಲೋ—ಅಮೇರಿಕನ ಸತ್ತೆ ಇಲ್ಲದಾಗಿದೆ. ಟರ್ಕಿಯ ಕೆಲವು ಭಾಗ ಹಾಗೂ ಅಫಗಾಣಿಸ್ಥಾನಗಳು ಸಹಜವಾಗಿ ದೊಡ್ಡದಾದ ರಶಿಯದಲ್ಲಿ ಸೇರುವಂತಾಗಬಹುದು. ಇತ್ತ ಪೂರ್ವದ ಕಡೆಗೆ ರಶಿಯವು ಮಂಗೋಲಿಯಾ ಹಾಗೂ ಹಿಂಸ್‌ಕಿಯಾಂಗಗಳ ಹೊರಭಾಗಗಳನ್ನು ಕಮ್ಯುನಿಸ್ಟರು ಮಂಚೂರಿಯಾವನ್ನು ತಮ್ಮ ಕೈಕೆಳಗೆ ಹಿಡಿದಿದ್ದಾರೆ. ಕೊರಿಯಾವು ಸ್ವಲ್ಪ ಒತ್ತಾಯದಿಂದ ರಶಿಯನ್ನರ ಪ್ರಭಾವಕ್ಕೊಳಗಾಗಬಹುದು. ರಶಿಯನ್ನರು ಇದಕ್ಕಿಂತಲೂ ಮುಂದೆ ಹೋಗದಿದ್ದರೂ ಇಷ್ಟರಿಂದಲೆ ಅತಿ ಬಲಾಢ್ಯರಾಗುವರು. ಮತ್ತು ಮುಂದೆ ರಶಿಯನ್ ವಿರೋಧಿ ಬಣದಿಂದ ಅಂಜಿಕೆ ಇರುವದೆಂದು ಅನಿಸಿದರೆ ಅವರು ಇದಕ್ಕಿಂತಲೂ ಮುಂದೆ ಹೋಗಬಹುದು. ದಾಳಿ ಮಾಡುವದು ಹಾಗೂ ಗೆದೆಯುವ ವಿಚಾರಗಳನ್ನು ತರತಕ್ಕದ್ದೇ ಅಲ್ಲ. ಕಮ್ಯುನಿಸ್ಟರನ್ನು ಎತ್ತಿಹಿಡಿಯುವದರ ಸಲುವಾಗಿ ಗ್ರೀಸ, ಹಿಂದುಸ್ತಾನ, ಚೀನ ಹಾಗೂ ಜಪಾನಗಳಲ್ಲಿ ಅಂತರಿಕ ಅಶಾಂತತೆಯನ್ನು ಎಬ್ಬಿಸಿದರೆ ಸಾಕು. ಆ ರಾಷ್ಟ್ರಗಳಲ್ಲಿ ತಮ್ಮ ಸ್ನೇಹಪಾತ್ರವಾದ ಸರಕಾರಗಳನ್ನು ಸ್ಥಾಪಿಸಿಕೊಂಡು ಕೆಲವು ಅರ್ಥಿಕ ಸವಲತ್ತುಗಳನ್ನು ಬೇಡುತಿರುವ ಬ್ರಿಟಿಶ, ಅಮೇರಿಕನ್ ಡಚ್ ಮೊದಲಾದವರ ವಿರುದ್ಧ ಪೂರ್ವದಲ್ಲಿ ಇರುವ ದ್ವೇಷಾಸೂಯೆಯು ಜ್ವಾಲೆ ಮತ್ತಷ್ಟು ಬೆಳೆದಿದೆ. ಇದರಿಂದ ರಶಿಯವು ಕಮ್ಯುನಿಸ್ಟ ಬಣವನ್ನು ಸಂಘಟಿಸುವಲ್ಲಿ ಯಶಸ್ವಿಯಾಗಬಹುದೆಂಬುದು ಕಾಣಿಸತೊಡಗಿದೆ. ಇದರಂತೆ ಬ್ರಿಟನ ಅಮೇರಿಕೆಗಳು ರಶಿಯ ವಿರೋಧಿ ಬಣವನ್ನು ಯಶಸ್ವಿ ರೀತಿಯಲ್ಲಿ ಸಂಘಟಿಸಬಲ್ಲವೇ? ಒಂದು ವೇಳೆ ಹಾಗೆ ಮಾಡಿದರೆ ಅದನ್ನು ಅವರು ನಿಸ್ತರಿಸಬಲ್ಲರೇ? ಇಂಥ ಬಣವನ್ನು ನಿರ್ಮಿಸಬೇಕಾದದ್ದೇ ಆದರೆ ಅಮೇರಿಕೆಯು ಮುಂದೆ ಬಂಧುರೀತಿನೀತಿಯನ್ನು ಗೊತ್ತುಪಡಿಸಿ ಅರ್ಥಿಕ ಹಾಗು ಮಿಲಿಟರಿ ಸಹಾಯವನ್ನು ಮಾಡಬೇಕು. ಅಂದರೆ ಪ್ರಜಾಸತ್ತಾತ್ಮಕ ಬಣದ ಪ್ರಶ್ನೆಯು ಅಮೇರಿಕೆಯ ಸ್ಥಿರತೆ, ಬಲ ಹಾಗೂ ಸ್ಪರ್ಧೆಯನ್ನೇ ಅವಲಂಬಿಸಿರುವದು.

### ನಾವು ಯಾರನ್ನು ಗಣಿಸಬಹುದು

ಮೊದಲನೆಯದಾಗಿ, ನಾವು ಯಾವ ರಾಷ್ಟ್ರಗಳನ್ನು ಸಂಪೂರ್ಣ ನಂಬಿಕೆಯಿಂದ ಗಣಿಸಬಹುದು?

—೬ನೇ ಪುಟಕ್ಕೆ



## ಪುಸ್ತಕ ಮತ್ತು ವಿಮರ್ಶೆ

### ಮೃಗಜಲ

ಲೇ: ಶ್ರೀ ಟಿ. ಆರ್. ಭಾಗವತ, ಎಂ. ಎ., ಪ್ರಕಾಶಕರು: ದಿ ಕೆನರಾ ಬುಕ್ಸ ಎಂಡ ನ್ಯೂಸ ಏಜನ್ಸಿ,- ಲಾಲಬಾಗ, ಮುಂಬಯಿ ೧೨. ಕ್ರೌನ ಅ.ಪ. ೬೬ ಪುಟ. ಬೆಲೆ: ೦—೧೨—೦

ಮೃಗಜಲ, ಸಮಾಧಿ ಸ್ತಂಭ, ಬಲಿದಾನ, ನಂಜುಂಡ, ಪುಟ್ಟು, ಬೂದಗಳವು, ಸೂರ್ಯ ಗ್ರಹಣ ಎಂಬಏಳು ಚಿಕ್ಕಕತೆಗಳನ್ನೊಳಗೊಂಡ ಈ ಚಿಕ್ಕ ಹೊತ್ತಿಗೆಯ ಪುಟ್ಟ ಕತೆಗಳೆಲ್ಲವೂ ವಾಚನೀಯವಾಗಿವೆ. ಅವುಗಳಲ್ಲಿ ಸಾಕಷ್ಟು ವೈವಿಧ್ಯವೂ ಇದೆ. "ಮೃಗಜಲ" ನಾಲ್ಕೇ ಪುಟಗಳಲ್ಲಿ ಕಾಲೇಜ ಕುವರಿಯೊಬ್ಬಳ ಸವಿ ಕನಸು ಒಡೆದುದನ್ನು ಬಣ್ಣಿಸುತ್ತದೆ. "ನಂಜುಂಡ" ಮತ್ತು "ಪುಟ್ಟು" ಇವು ಕತೆಗಳನ್ನಲು ಬಾರದಿದ್ದರೂ ಸಮಾಜದಲ್ಲಿ ಅಲ್ಲಲ್ಲಿ ದೃಷ್ಟಿಗೆ ಬೀಳುತಿರುವ ಎರಡು ವಿಲಕ್ಷಣ ಸ್ವಭಾವಗಳನ್ನು ಯಶಸ್ವಿಯಾಗಿ ಚಿತ್ರಿಸುತ್ತವೆ. "ಬೂದಗಳವು" ಉತ್ತಮ ವಿಷಾದಾಂತ ಕಥೆ. ಶ್ರೀ ಭಾಗವತರ ಕತೆಗಳು ಇನ್ನೂ ಕೆಲವು ಬೆಳಕು ಕಾಣದೆ ಉಳಿದಿವೆಯೆಂದು ಮುನ್ನುಡಿಯಿಂದ ತಿಳಿಯುತ್ತದೆ. ಅವು ಅವಶ್ಯ ಬೆಳಕು ಕಾಣಬೇಕು. ಉತ್ತರ ಕನ್ನಡ ಜಿಲ್ಹೆಯ ಜೀವನದ ಮೇಲೆ ಅವರ ಕತೆಗಳು ಚೆನ್ನಾಗಿ ಬೆಳಕು ಕೆಡಹುವದನ್ನು ಕಾಣುತ್ತೇವೆ. ಅವರೀಗ ಬರೆಯುವದನ್ನು ಬಿಟ್ಟುಕೊಟ್ಟಿರುವದು ವಿಷಾದಕರ. ಈ ಕತೆಗಳ ಮೇಲಿಂದ ಅವರು ಕನ್ನಡ ಕಥಾವಾಙ್ಮಯಕ್ಕೆ ಸುಯೋಗ್ಯ ಕೃತಿಗಳನ್ನು ನೀಡಬಲ್ಲರೆಂದು ಧೈರ್ಯವಾಗಿ ಆಶಿಸಬಹುದು. ಅವರು ಮತ್ತೆ ಲೆಕ್ಕಣಿಕೆ ಹಿಡಿಯುವಂತಾಗಲೆಂದು ಹಾರೈಸೋಣ.

### ಬೆಟ್ಟದ ಹೊಳೆ

ಲೇಖಕರು: ಶ್ರೀ ಸಿಂಪಿ ಲಿಂಗಣ್ಣ. ಪ್ರಕಾಶಕರು: ಸಾಧನ ಮುದ್ರಣಾಲಯ ಧಾರವಾಡ. ಕ್ರೌನ ಅ. ಪ. ೧೧೦ ಪುಟ ಬೆಲೆ ರೂ. ೧—೪—೦

ಇದೊಂದು ಆದರ್ಶವಾದಿ ನೀಳ್ಗತೆ. ಸಂಗಮನೇರಿಯ "ಪ್ರಭು" ವೆಂಬ ಬಡಹುಡುಗ ಹಳ್ಳಿಯ ಬಯಲಾಟ, ನಾಟಕಗಳಲ್ಲಿ ಪಾತ್ರ ವಹಿಸಿ ಕಲೆಯ ಉಪಾಸನೆಯ ಸೆಳವಿಗೆ ಸಿಕ್ಕಿದವನು ಅನೇಕ ಅತಂಕಗಳನ್ನು ದಾಟಿ ಸಾಹಿತ್ಯ ಸೇವೆಯ ದೀಕ್ಷೆಗೆ ಬದ್ಧನಾಗುವದೇ ಕಥಾವಸ್ತು. ಇಡಿ ಕಥೆ ಹಳ್ಳಿಯ ವಾತಾವರಣದಲ್ಲಿ ಸಾಗುತ್ತದೆ. ಹಳ್ಳಿಗಳಲ್ಲಿರುವ ತೆರೆಮನಸಿನ ವಾತಾವರಣ ಹಾಗೆಯೆ ಅಲ್ಲಿಯ ಕ್ಷುದ್ರಬುದ್ಧಿಯ ರಾಗದ್ವೇಷಗಳು ಕಥೆಯಲ್ಲೆಲ್ಲ ಒಪ್ಪಾಗಿ ಮೂಡಿದ್ದರೂ ಲೇಖಕರ ಹತ್ತು ಹಲವು ಇತರರಿಗೆ ಮರುಳಗಳೆಂದೆನಿಸಬಹುದಾದ ಭಾವನೆಗಳು ಎಲ್ಲೆಡೆಯಲ್ಲೂ ತಲೆಹಾಕಿ ಓದುಗನನ್ನು ಬೇಸರಕ್ಕೆ ಗುರಿಮಾಡುತ್ತವೆ. ಅಸನ, ಯೋಗ, ಅರವಿಂದ ತತ್ವಜ್ಞಾನ, ಕರ್ನಾಟಕತ್ವ ಮುಂತಾದವುಗಳ ಪ್ರಚಾರವೇ ನಡೆದಿರುವಂತೆ ಅಲ್ಲಲ್ಲಿ ಭಾಸವಾಗುತ್ತದೆ. ಒಂದು ಮಿತಿಯಿಂದ ಸ್ವಾಭಾವಿಕವಾಗಿ ಬಂದರೆ ಇವು ಕಥೆಗೆ ಕಳೆ ಕಟ್ಟಿಸಬಹುದಾದರೂ ಮೇರೆದಪ್ಪಿದರೆ ಅವು ನಾಯಕನನ್ನು ಕೈಗೊಂಬೆಯಂತೆ ಕುಣಿಸಿ ಅವನ ವ್ಯಕ್ತಿತ್ವವನ್ನೇ ಮುಸುಕುಗೊಳಿಸದಿರವು. ಆ ದೋಷ ಇಲ್ಲಿ ಕಾಣಿಸುತ್ತದೆ. ಲೇಖಕರು ತಮ್ಮ ಮೋಹದ ಮತಗಳನ್ನು ಹಿಡಿತದಲ್ಲಿರಿಸಿದ್ದರೆ ಅವರ ಸರಳಸುಂದರ ಶೈಲಿ ಕಥೆಯನ್ನು ಸುಂದರವಾಗಿ ಮಾಡುತಿತ್ತು. ಈಗಿರುವ ಸ್ಥಿತಿಯಲ್ಲಿ ಎಲ್ಲ ಚಿಂತನೆ, ಸಾಧನೆ, ಯೋಗ, ಧ್ಯಾನ, ಮತ್ತು ಎಲ್ಲಕ್ಕೂ ಹೆಚ್ಚಾಗಿ ಅಂತರ್ವಾಣಿ ಸಾಕ್ಷಾತ್ಕಾರದ ನಂತರ "ಚಿಕ್ಕ ಚಿಕ್ಕ ನೂರಾರು ಪುಸ್ತಕಗಳನ್ನು ಪ್ರಕಟಿಸುವ" ನಿರ್ಧಾರಕ್ಕಿಂತ ಮಹತ್ತರವಾದ ಸಿದ್ಧಿಯನ್ನು ನಾಯಕನು ಸಂಪಾದಿಸುವದಿಲ್ಲ. ಕಥೆ ಮುಗಿಯುವಷ್ಟು ಹೊತ್ತಿಗೆ ಈ ಪರ್ವತಪ್ರಸವವನ್ನು ಕಂಡು ನಿರಾಶೆಯುಂಟಾಗುತ್ತದೆ.

### ಎತ್ತಿದ ಕೈ

ಲೇಖಕರು:-ರಂ. ಶ್ರೀ. ಮುಗಳಿ ಪ್ರಕಾಶಕರು: ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ. ೧೫೨ ಪುಟ ಬೆಲೆ ೧—೧೪—೦.

ಶ್ರೀ ಮುಗಳಿಯವರ ಹತ್ತು ಏಕಾಂಕ ನಾಟಕಗಳು ಇಲ್ಲಿ ಸಂಗ್ರಹಿಸಲ್ಪಟ್ಟಿವೆ. ಇವುಗಳಲ್ಲಿ ಹಲವು ಈಗಾಗಲೆ ಬೇರೆ ಬೇರೆ ಪತ್ರಿಕೆಗಳಲ್ಲಿ ಬೆಳಕು ಕಂಡವುಗಳು. "ಎತ್ತಿದ ಕೈ" ಮೊದಲ ನಾಟಕ. ಅದರ ಹೆಸರನ್ನೆ ಸಂಗ್ರಹ ಧರಿಸಿದೆ.

ತಮ್ಮ ಮೊದಲನೆ ಏಕಾಂಕ ನಾಟಕ ಸಂಗ್ರಹವಾದ ಇದರ ಬಗ್ಗೆ "ಏಕಾಂಕ ರಚನೆಯಲ್ಲಿ ಇದು 'ಎತ್ತಿದ ಕೈ' ಎಂದು ಹೇಳಲಾರೆ" ಎಂದು ಲೇಖಕರು ಅಧೈರ್ಯ ತೋರಿದ್ದಾರೆ. ಸಾಮಾಜಿಕ ಜೀವನದ ವಿವಿಧಾಂಗಗಳಿಗೆ ಕನ್ನಡಿ ಹಿಡಿಯುವದರಲ್ಲಿ ಲೇಖಕರಿಗೆ ಇಲ್ಲಿ ತಕ್ಕ ಮಟ್ಟಿನ ಯಶಸ್ಸು ದೊರೆತಿದೆಯೆಂದು ಹೇಳಬಹುದು. ಎತ್ತಿದ ಕೈ, ಮೋಟಾರ ಮಾರಿಕಾ, ವಿದ್ಯಾವತಿ, ಕೂಡಲಾರದ ಕಣ್ಣು ಇವು ಒಳ್ಳೆ ಯಶಸ್ವಿಯಾಗಿವೆ. ಏಕೀಕರಣ ಕೊನೆ ಕೊನೆಯವರೆಗೆ ಸಹಜವಾಗಿ ಪರಿಣಾಮಕಾರಿಯಾಗಿ ಸಾಗಿದರೂ ಕೊನೆಗೆ ಏಕೀಕರಣದ ಗುಣವನ್ನು ಸಿದ್ಧಮಾಡುವ ಹವ್ಯಾಸದಲ್ಲಿ ಕೆಟ್ಟು ಹೋಗುತ್ತದೆ. ಅದು ಸಮಸ್ಯಾತ್ಮಕವಾಗಿಯೆ ಉಳಿದಿದ್ದರೆ ಹೆಚ್ಚು ಸಫಲವಾಗುತ್ತಿತ್ತು. ಓಲೇ ಚೀಲವೂ ದುರ್ಬಲವಾಗಿ ಕೊನೆಯಗೊಳ್ಳುತ್ತದೆ. "ಕಿಟಿ" ಯಿಂದ ಇದಕ್ಕಿಂತ ದೊಡ್ಡ "ಕಿಟಕಿಟಿ" ಯನ್ನು ನಿರೀಕ್ಷಿಸಿದ ಮನಸ್ಸು ನಿರಾಶವಾಗುತ್ತದೆ.

ಉಳಿದವು ಸಾಮಾನ್ಯ ಪ್ರತಿಯವು.

### ಸ್ವಾತಂತ್ರ್ಯದೆಡೆಗೆ

ಲೇಖಕರು:— ಶ್ರೀ ಬಸವರಾಜ ಕಟ್ಟೀಮನಿ ಪ್ರಕಾಶಕರು:— ಶಾರದಾ ಪ್ರಕಟನಾಲಯ ಅರಳೆಪೇಟೆ, ಬೆಂಗಳೂರು ನಗರ. ೨೨೦ ಪುಟ ಬೆಲೆ ರೂ. ೨-೦-೦

ಹಿಂದುಸ್ಥಾನ ಸ್ವಾತಂತ್ರ್ಯ ಯುದ್ಧದ ಹಿನ್ನೆಲೆಯಲ್ಲಿ ಹೆಣೆದ ಕಥೆಯಿದು. ಬಡ ಪೋಲೀಸು ಶಿಪಾಯಿಯ ಹನ್ನೆರಡು ವರ್ಷದ ಮಗನು ಸ್ವಾತಂತ್ರ್ಯದ ಕರೆಗೆ ಓಗೊಟ್ಟು ಅದಕಾಗಿ ಬಾಳನ್ನು ಮೀಸಲಿಟ್ಟದ್ದು ಕಥೆಯ ವಸ್ತು. ಬಡವರ ಬಾಳು, ಶ್ರೀಮಂತರ ಮದಾಂಧತೆ ಇವುಗಳ ಬಗ್ಗೆ ಲೇಖಕರಲ್ಲಿರುವ ಸಿಟ್ಟೆಲ್ಲ ಇಲ್ಲಿ ಕಿಡಿಕಾರಿದೆ. ಶ್ರೀಮಂತರ ದೇಶಸೇವೆಗೂ ಬಡವರ ದೇಶಸೇವೆಗೂ ಇರುವ ಅಜಗಜಾಂತರವನ್ನು ಅವರು ಬೊಟ್ಟಿಟ್ಟು ತೋರಿದ್ದಾರೆ. ಹಳ್ಳಿಯ ಸುಧಾರಣೆಯೇ ನಿಜವಾದ ದೇಶಸೇವೆ, ಅದಕ್ಕೆ ಬಡವರೇ ಟೊಂಕ ಕಟ್ಟಬೇಕು ಎಂದು ಅವರು ತೋರಿಸಿ ಕೊಟ್ಟಿದ್ದಾರೆ. ಅವರ ನಾಯಕನು ಹಾಗೆಯೆ ಮಾಡಿತೋರಿಸಿದ್ದಾನೆ. ಎರಡನೆ ದುಂಡು ಮೇಜಿನ ಪರಿಷತ್ತಿನ ನಂತರದ ಚಳವಳಿಯಿಂದ ಚಲೇಜಾವ ಚಳವಳಿಯ ವರೆಗೆ ಕರ್ನಾಟಕದ ಹಳ್ಳಿಗಳಲ್ಲಾದ ಸ್ಥಿತ್ಯಂತರಗಳನ್ನು ಹಾಸುಹೊಕ್ಕಾಗಿ ನೇಯಲಾಗಿದೆ.

ಒಟ್ಟಿನ ಮೇಲೆ ಕಥೆ ಯಶಸ್ವಿಯಾಗಿದೆ. ಆದರೆ ಅದರಲ್ಲಿ ಅಷ್ಟು ಸೆಳೆತವಿಲ್ಲ. ಅದು ಕುತೂಹಲವನ್ನು ಕರಳಿಸುವದಿಲ್ಲ. ಆದರೆ ಅದರ ಪ್ರವಾಹ ಎಲ್ಲಿಯೂ ತಡೆದು ನಿಂತು ಭಣಗುಟ್ಟುವದೂ ಇಲ್ಲ, ಅಲ್ಲಲ್ಲಿ ಪ್ರಣಯ ಸನ್ನಿವೇಶ, ಸರಕಾರದ ದಬ್ಬಾಳಿಕೆಯ ಸ್ವರೂಪ, ರಾಜಕೀಯ ಪಂಥಗಳ ಸ್ವಾರ್ಥ ಮೊದಲಾದವುಗಳು ಒಂದು ಕಥೆಯನ್ನು ಸ್ವಾರಸ್ಯಗೊಳಿಸುತ್ತವೆ. ಆದರೆ ಕಣ್ಣು ಬಿಚ್ಚಿ ಓದುವವನಿಗೆ ಕೆಲ ಅಸಂಗತತೆಗಳೂ ಇಲ್ಲಿ ತೋರಬಾರದೆ ಇಲ್ಲ. ಕಥೆಯ ನಾಯಕ ಶೇಖರ, ಮತ್ತು ಮುಖ್ಯ ಪಾತ್ರಗಳಾದ ಗೌರಿ, ಶಾಂತೆಯರ ವಯಸ್ಸು ಓದುಗನನ್ನು ಗೊಂದಲದಲ್ಲಿ ಕೆಡಹುತ್ತವೆ. ಸ್ವತಃ ನಾಯಕನು ಕೂಡ ಒಮ್ಮಿಂದೊಮ್ಮೆ ಅಂದರೆ ಬರಿ ಎರಡು ದಿನಗಳ ಅವಧಿಯಲ್ಲಿ ಪೋಲೀಸನಮಗನಿಂದ ದೇಶಭಕ್ತ-ಅದೂ ಅರಿತ ದೇಶಭಕ್ತನಾದುದು ಆಶ್ಚರ್ಯ. ಅವನ ಗೃಹತ್ಯಾಗವನ್ನು ಸಂಭಾವ್ಯವೆಂದು ಮನವರಿಕೆ ಮಾಡಿಕೊಡಲು ಲೇಖಕರು ಸಮರ್ಥರಾಗಿಲ್ಲ. ಹಳ್ಳಿಗಳ ಅಜ್ಞಾನವನ್ನು ಸ್ಫುಟವಾಗಿ ತೋರಿಸಲು ಸಮರ್ಥರಾಗಿದ್ದರೂ ಅವುಗಳನ್ನು ಸುಧಾರಿಸುವ ಕೆಲಸವನ್ನು ಅವರ ನಾಯಕ ಅತ್ಯಂತ ಲೀಲಾಜಾಲವಾಗಿ ಮಾಡಿಬಿಟ್ಟಂತೆ ತೋರಿಸಿ ವಾಸ್ತವತೆಯನ್ನು ಎಲ್ಲೊ ಬಿಟ್ಟು ಹೋಗಿದ್ದಾರೆ. ಅವರ ಕಲ್ಲಾಪುರ ಅಸಾಧಾರಣ ಹಳ್ಳಿಯಾಗಿರಬೇಕು. ಅಥವಾ ಅವರ ನಾಯಕನ ಭಾಗ್ಯರೇಷೆ ದಪ್ಪವಾಗಿರಬೇಕು. ಹಳ್ಳಿಗರನ್ನು ಸುಧಾರಿಸುವ ಕಾರ್ಯದಲ್ಲಿ ಮುಳ್ಳು ಚುಚ್ಚಿಸಿಕೊಂಡವರ ಅನುಭವ ಬೇರೆಯೆ ಕಥೆ ಹೇಳುತ್ತದೆ. "ಸ್ವಾತಂತ್ರ್ಯದ ಹೋರಾಟದಲ್ಲಿ ಜನರನ್ನು ಮುನ್ನಡೆಸಬಲ್ಲ ಸಾಹಿತ್ಯ ಕನ್ನಡದಲ್ಲಿದೆಯೆ" ಎಂದು ಗಾಂಧೀಜಿ ಮದ್ರಾಸಿಗೆ ಬಂದಾಗ ಕೇಳಿದ್ದಕ್ಕೆ ಉತ್ತರ ರೂಪವಾಗಿ ಈ ಕೃತಿಯನ್ನು ಶ್ರೀ ಬಸವರಾಜರು ಬರೆದರೆಂದು ಅವರ ಮುನ್ನುಡಿಯಿಂದ ಊಹಿಸಬಹುದು. ಅದುದರಿಂದಲೇ ಹಳ್ಳಿಯ ಸೇವೆಯಲ್ಲಿರುವ ತೊಡಕುಗಳನ್ನು ಅವರು ಲಘು ಮಾಡಿ ತೋರಿಸಿದ್ದಾರೋ ಏನೊ, ಆದರೆ ಅದು ಅವರ ನಾಯಕನ ಸಾಧನೆಯನ್ನೂ ಅಷ್ಟು ಮಟ್ಟಿಗೆ ಲಘು ಮಾಡಿ ಬಿಡುತ್ತದೆ.

ಈ ಕಥೆಯ ಜಾತಿಯನ್ನು ಕುರಿತು "ಇದು ಕಾದಂಬರಿಯೂ ಅಲ್ಲ, ಮಹಾಶ್ವೇತೆಯೂ ಅಲ್ಲ" ಎಂದು ಲೇಖಕರು ಮುನ್ನುಡಿಯಲ್ಲಿ ಬರೆದಿದ್ದಾರೆ. ಅವರೆನ್ನುವದು ತಥ್ಯ. ಕಥೆಯನ್ನೋದಿದ ನಂತರ ಲೇಖಕರು ಬಾಣಭಟ್ಟನೂ ಅಲ್ಲ ಎಂಬದು ಮನವರಿಕೆಯಾಗುವದು.

### ಇನ್ನಹೂ ಕುರ್‌-ಆನುನ್ ಕರೀಮ್

ಲೇಖಕರು: ಮೌಲ್ವಿ ಮಹಂಮ್ಮದ ಬುಡನ್ ಸಾಹೇಬ ಬರದೂರ ಗದಗ. ಪ್ರಕಾಶಕರು: ಅಹಮದೀಯಾ ಅಂಜುಮಾನ್ ಇಶಾ-ಅತ್, ಎ ಇಸ್ಲಾಮ, ಹುಬ್ಬಳ್ಳಿ. ಡೆಮಿ ಅ. ಪ. ೭೨ ಪುಟ. ಬೆಲೆ ?

ಮುಸ್ಲಿಮರ ವೇದವಾಗಿರುವ ಕುರ್ ಅನುನ್ ಕರೀಮ (ಕುರಾಣ) ಗ್ರಂಥ ಜಗತ್ತಿನ ಅತ್ಯಮೂಲ್ಯ ಧರ್ಮಗ್ರಂಥಗಳಲ್ಲೊಂದಾಗಿದ್ದು ಅದು ಬಹುತರ ಜಗತ್ತಿನ ಎಲ್ಲ ನಾಗರಿಕರ ಭಾಷೆಗಳಲ್ಲೂ ಭಾಷಾಂತರ ಹೊಂದಿ ಪ್ರಕಟವಾಗಿದ್ದರೂ ಕನ್ನಡದಲ್ಲಿ ಅದು ಪರಿವರ್ತನೆ ಹೊಂದದೆ ಇದ್ದ ಕೊರತೆಯನ್ನು ನೀಗಿಸಿ ಪ್ರಸ್ತುತ ಲೇಖಕರು ಈ ಗ್ರಂಥವನ್ನು ಬರೆದಿದ್ದಾರೆ. ಇದು ಖಂಡಿತವಾಗಿ ಸ್ತುತ್ಯ ಉಪಕ್ರಮ. ಜತೆಜತೆಯಾಗಿ ಬಾಳಬೇಕೆಂದು ದೈವೀ ಸಂಕೇತವೇ ನಿಯಮಿಸಿದ ಭಾರತೀಯ ಹಿಂದೂ ಮುಸ್ಲಿಮರಲ್ಲಿ ಸೌಹಾರ್ದ, ಸಹನೆಗಳು ಬೇಕಾಗಿದ್ದರೆ ಹೀಗೆ ಪರಸ್ಪರರ ಧರ್ಮತತ್ವಗಳನ್ನು ತಿಳಿದುಕೊಳ್ಳುವ ಸಾಧನಗಳು ಅತ್ಯವಶ್ಯ. ಲೇಖಕರ ಪ್ರಸ್ತುತ ಗ್ರಂಥದಿಂದ ಇಂಥ ಒಂದು ಸಾಧನ ಒದಗಿದ್ದು ಮಾತ್ರವಲ್ಲ, ಮೂಲ ಕುರಾಣದ ಭಾಷೆಯಾದ ಅರಬ್ಬಿಯಾಗಲಿ ಆ ಬಗ್ಗೆ ಮಹತ್ವದ ಗ್ರಂಥಗಳುಳ್ಳ ಉರ್ದು ಭಾಷೆಯಾಗಲಿ ಬಾರದ ಕೇವಲ ಕನ್ನಡ ಬಲ್ಲ ಸಾವಿರಾರು ಮುಸ್ಲಿಮರಿಗೂ ಇದರಿಂದ ಉಪಕಾರವಾಗಿದೆ. ವೇದಗಳ ಅರ್ಥವನ್ನು ತಿಳಿಯಲು ಯತ್ನಿಸಬಾರದೆಂಬ ಭ್ರಮೆ ಹಿಂದೂಗಳಲ್ಲಿ ಪ್ರಚಲಿತವಾಗಿರುವಂತೆ ಕುರಾಣ ಗ್ರಂಥ ಕೇವಲ ಪಠನ ಪೂಜನಕ್ಕಾಗಿದೆ ಹೊರತು ತಾತ್ಪರ್ಯಗ್ರಹಣಕ್ಕಲ್ಲವೆಂಬ ಅಂಧಶ್ರದ್ಧೆ ಮುಸ್ಲಿಂರಲ್ಲಿಯೂ ಇದೆಯೆಂದು ಲೇಖಕರು ತಿಳಿಸಿ ಇದು ತಪ್ಪು ಭಾವನೆಯೆಂದು ಹೇಳಿದ್ದಾರೆ. ಮುನ್ನುಡಿಯಲ್ಲಿ ಶ್ರೀ ವಕೀಲ ಜಾಲಿಹಾಳ ಅನಂತರಾಯರು ಹೇಳಿರುವಂತೆ ಇದು ಹಿಂದೂ ಮುಸ್ಲಿಮ ಸೌಹಾರ್ದಕ್ಕೆ ಪೋಷಕವಾಗಲೆಂದು ಹಾರೈಸಿ ಈ ಗ್ರಂಥವನ್ನು ಸ್ವಾಗತಿಸುತ್ತೇವೆ.

ಆದರೆ ಈ ಅನುವಾದದ ಭಾಷೆಯ ಬಗ್ಗೆ ಕೆಲ ಮಾತುಗಳನ್ನು ಹೇಳಬೇಕಾಗಿದೆ. ಇದರ

—೧೬ನೇ ಪುಟಕ್ಕೆ



ದಿ ನೂತನ ಆಯುರ್ವೇದ ಕಾರ್ಯಾಲಯದ ಧನ್ವಂತರಿ ಮಹೋತ್ಸವ

ಹುಬ್ಬಳ್ಳಿಯಲ್ಲಿ ತಾ. ೨೨-೧೦-೧೯೪೬ ನೆಯ ದಿನಾಂಕ ದಿ ನೂತನ ಆಯುರ್ವೇದ ಕಾರ್ಯಾಲಯಲಿ. ಹುಬ್ಬಳ್ಳಿ ಶಾಖೆಯಲ್ಲಿ ಶ್ರೀ ಧನ್ವಂತರಿ ಜಯಂತ್ಯುತ್ಸವವನ್ನು ಶ್ರೀ ದಿವಾಕರರ ಅಧ್ಯಕ್ಷತೆಯಲ್ಲಿ ಜರಗಿಸಲಾಯಿತು.

೧೯೪೧ ರಲ್ಲಿಯೇ ಪ್ರಾರಂಭವಾದ ಈ ಸಂಸ್ಥೆಯು ೧೯೪೩ ರಲ್ಲಿ ಲಿಮಿಟೆಡ್ ಕಂಪನಿಯಾಗಿ ರೂಪಾಂತರ ಮಾಡಲ್ಪಟ್ಟಿತು. ತಜ್ಞ ವೈದ್ಯರ ನೇತೃತ್ವದಲ್ಲಿ ಎಲ್ಲ ಬಗೆಯ ಆಯುರ್ವೇದ ಔಷಧಗಳು ಶಾಸ್ತ್ರೋಕ್ತವಾಗಿ ಸಿದ್ಧವಾಗುತ್ತವೆ. ಕಂಪನಿಯ ಅರ್ಧದಷ್ಟು ಲಾಭವನ್ನು ಆಯುರ್ವೇದದ ಸೇವೆಗಾಗಿಯೇ ವಿನಿಯೋಗಿಸಬೇಕೆಂಬ ನಿರ್ಬಂಧವನ್ನಿಟ್ಟುಕೊಂಡ ಕರ್ನಾಟಕದ ಮೊಟ್ಟಮೊದಲನೆಯ ಕಾರಖಾನೆಯಿದು. ಈ ಸಂಸ್ಥೆಯ ಔಷಧಗಳು ಲೋಕಪ್ರಿಯವಾಗಿದ್ದು ಅನೇಕ ವೈದ್ಯ ಡಾಕ್ಟರರೂ ಸಂಘ ಸಂಸ್ಥೆಗಳೂ ತಮ್ಮ ಮೆಚ್ಚುಗೆಯನ್ನು ವ್ಯಕ್ತಗೊಳಿಸಿದ್ದಾರೆ. ಕಾರ್ಯಾಲಯದ ಹುಬ್ಬಳ್ಳಿ ಶಾಖೆಯು ೧೦ ತಿಂಗಳ ಹಿಂದೆ ಪ್ರಾರಂಭವಾಯಿತು. ಮೈಸೂರು ಸಂಸ್ಥಾನ ಮತ್ತು ಆಂಧ್ರ ಪ್ರಾಂತಗಳಿಗಾಗಿ ಒಂದು ಪ್ರಚಾರ ಕೇಂದ್ರವು ಶೀಘ್ರವೇ ಬೆಂಗಳೂರಲ್ಲಿ ಪ್ರಾರಂಭಿಸಲ್ಪಡುವದೆಂದು ತಿಳಿಯುತ್ತದೆ. ಅನುಭವಿಕ ತಜ್ಞರ ನೇತೃತ್ವ, ಉತ್ಸಾಹಿ ತರುಣರ ಕರ್ತವ್ಯದಕ್ಷತೆಗಳಿಂದ ಈ ಸಂಸ್ಥೆಯು ಒಳ್ಳೆ ಪ್ರಗತಿಯನ್ನು ಹೊಂದುತ್ತಿದ್ದು, ಕರ್ನಾಟಕದಲ್ಲಿ ಇದೊಂದು ಆದರ್ಶ ಸಂಸ್ಥೆಯಾಗಲೆಂದು ಹಾರೈಸುತ್ತೇವೆ.



## ಸಂಪಾದಕೀಯ
# ಟೀಕೆ-ಟಿಪ್ಪಣಿಗಳು

### ಧರ್ಮಾತ್ಮರು ದಿವಂಗತರಾದರು

ಹಿಂದುಸ್ಥಾನದ ಪ್ರಸಿದ್ಧ ಮುಖಂಡರೂ ವಯೋವೃದ್ಧರೂ ಧರ್ಮಾತ್ಮರೂ ಶಿಕ್ಷಣಾಭಿಮಾನಿಗಳೂ ಆಗಿದ್ದ ಪಂಡಿತ ಮದನಮೋಹನ ಮಾಲವೀಯರವರು ದಿವಂಗತರಾದ ಸುದ್ದಿಯನ್ನು ಕೇಳಿ ಇಡೀ ಭರತಖಂಡದಲ್ಲಿಯ ಜನರೆಲ್ಲ ದು:ಖಿತರಾದರು. ಹಿಂದುಸ್ಥಾನದ ವಯೋಮಾನವನ್ನನುಲಕ್ಷಿಸಿದರೆ ಪಂಡಿತರು ಹೆಚ್ಚು ಕಾಲ ಬದುಕಿದರೆಂದು ಹೇಳಬಹುದಾದರೂ ಸದ್ಯದ ಸಂಕ್ರಮಣ ಕಾಲದಲ್ಲಿ ಅವರ ಅನುಭವಪೂರ್ಣ ಸಲಹೆ ಭಾರತೀಯ ಮುಖಂಡರಿಗೆ ವಿಶೇಷವಾಗಿ ಅವಶ್ಯವಿತ್ತೆಂಬುದು ನಿರ್ವಿವಾದವಾಗಿದೆ. ಭಾರತದ ಸ್ವಾತಂತ್ರ್ಯಕ್ಕಾಗಿ ಅಖಂಡ ಮೂರಪತ್ತು ವರುಷಗಳ ವರೆಗೆ ದೇಹ ಸವಿಸಿದ ಮಾಲವೀಯರು ಹಿಂದುಸ್ಥಾನ ಸ್ವತಂತ್ರವಾದುದನ್ನು ನೋಡಿ ಇಹಲೋಕಯಾತ್ರೆಯನ್ನು ಮುಗಿಸಿದ್ದರೆ ಅವರ ಆತ್ಮವು ಚಿರಶಾಂತಿಯನ್ನು ಹೊಂದುತ್ತಿದ್ದಿತು. ಆದರೆ ದೈವೇಚ್ಛೆಯನ್ನು ಮೀರುವವರಾರು? ಇರಲಿ. ಮಾಲವಿಯವರ ಜೀವನ ಆದರ್ಶ ಜೀವನ. ತಾರುಣ್ಯದಿಂದ ಪ್ರಾರಂಭವಾದ ಅವರ ರಾಷ್ಟ್ರಸೇವೆ ಕೊನೆಯುಸಿರಾಡುವವರೆಗೆ ಅಖಂಡವಾಗಿ ನಡೆದಿತ್ತೆಂಬುದು ಅವರ ಚರಿತ್ರೆಯನ್ನು ಓದಿದವರಿಗೆ ತಿಳಿಯದಿರದು. ಅವರು ಸನಾತನ ಧರ್ಮಾಭಿಮಾನಿಗಳಾಗಿದ್ದರೂ ಆ ಧರ್ಮಾಭಿಮಾನವು ಅವರ ರಾಷ್ಟ್ರಸೇವೆಗೆಂದೂ ಅಡ್ಡ ಬರಲಿಲ್ಲ. ಅವರು ಬರೀ ಮಾತಿನ ಮಲ್ಲರಾಗಿರದೆ ಆಡಿದಂತೆ ಮಾಡುವ ಶೂರರಾಗಿದ್ದರು. ಅಂತೆಯೆ ವೃದ್ಧಾಪ್ಯದಲ್ಲಿ ಕೂಡ ತಮ್ಮ ಜೀವನಕಾರ್ಯವಾದ ಹಿಂದೂ ವಿಶ್ವವಿದ್ಯಾಲಯದ ಉನ್ನತಿಗಾಗಿ ಪ್ರಯತ್ನಿಸುತ್ತಿದ್ದರು. ರಾಷ್ಟ್ರಸ್ವಾತಂತ್ರ್ಯಕ್ಕಾಗಿ ಜನ್ಮವೆತ್ತಿದ ಕಾಂಗ್ರೆಸ್ ಸಂಸ್ಥೆಯ ಎರಡನೇ ಅಧಿವೇಶನದಿಂದಲೆ ಅವರು ಅದರ ಸಂಬಂಧವನ್ನಿಟ್ಟುಕೊಂಡಿದ್ದರು. ಕೊನೆಯವರೆಗೂ ಅದರ ಏಕನಿಷ್ಠ ಸೇವಕರಾಗಿದ್ದರು. ಡಾಂಭಿಕತನವು ಅವರಿಗೆ ಸ್ವಲ್ಪೂ ಸೇರುತಿರಲಿಲ್ಲ. ನಿಷ್ಕಪಟಭಾವದಿಂದ ಅಲಸಿಗರಾಗದೆ ರಾಷ್ಟ್ರಸೇವೆ ಮಾಡುವದೆ ಅವರ ಜೀವನದ ಆಶಯವಾಗಿದ್ದಿತು. ಅವರು ಹಿಂದೀ ತರುಣರಿಗೆ ಆದರ್ಶ ಪುರುಷರಾಗಿದ್ದರು. ವಿಶ್ವವಿದ್ಯಾಲಯವು ಅವರ ಜೀವನದ ಕೀರ್ತಿಸ್ತಂಭವಾಗಿದೆ. ಅದನ್ನು ಇನ್ನೂ ಹೆಚ್ಚು ವ್ಯಾಪಕಗೊಳಿಸಿ ಅವರು ಆಶಿಸಿದಂತೆ ಹೆಣ್ಣುಮಕ್ಕಳ ಸಲುವಾಗಿಯೂ ಅಂಥ ವಿಶ್ವವಿದ್ಯಾಲಯವನ್ನು ಹೊರಡಿಸುವುದು ಅವರ ಅನುಯಾಯಿಗಳ ಕರ್ತವ್ಯವಾಗಿದೆ. ಶಿಕ್ಷಣ ಕಾರ್ಯಕ್ಕಾಗಿ ಅವರು ಕೂಡಿಸಿದಷ್ಟು ಹಣವನ್ನು ಹಿಂದುಸ್ಥಾನದಲ್ಲಿ ಬೇರೆ ಯಾರೂ ಕೂಡಿಸಿಲ್ಲೆಂದು ಹೇಳಿದರೆ ಅತಿಶಯೋಕ್ತಿಯಾಗದು. ಹಿಂದೂಸಂಸ್ಕೃತಿಯ ಬಗ್ಗೆ ಇವರು ನಿಶ್ಚಲ ಅಭಿಮಾನಿಗಳಾಗಿದ್ದರೂ ಪಾಶ್ಚಾತ್ಯ ಸಂಸ್ಕೃತಿಯಲ್ಲಿಯ ಗುಣಗಳನ್ನು ಸ್ವೀಕರಿಸುವಲ್ಲಿ ಹಿಂದೆ ಮುಂದೆ ನೋಡುತಿರಲಿಲ್ಲ. ಪೌರ್ವಾತ್ಯ ಪಾಶ್ಚಾತ್ಯ ಸಂಸ್ಕೃತಿಗಳ ಸಮ್ಮಿಲನವನ್ನು ಅವರಲ್ಲಿ ಕಾಣಬಹುದಾಗಿತ್ತು. ಇಂಥ ಸರ್ವಮಾನ್ಯ ವ್ಯಕ್ತಿಯು ಕಣ್ಮರೆಯಾದುದು ತುಂಬಬರಲಾರದ ಹಾನಿಯು. ಭಾರತೀಯರು ಅವರ ಆದರ್ಶವನ್ನು ಇಟ್ಟುಕೊಂಡು ನಿಷ್ಠೆಯಿಂದ ಅವರ ಕಾರ್ಯವನ್ನು ಮುಂದರಿಸಿ ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರಲೆಂದು ಹಾರಯಿಸುತ್ತೇವೆ.

### ಪರಿಸ್ಥಿತಿ ಸುಧಾರಿಸಹತ್ತಿದೆ

ಈ ವಾರದಲ್ಲಿ ಹಿಂದುಸ್ಥಾನದ ಪರಿಸ್ಥಿತಿ ಸುಧಾರಿಸಹತ್ತಿದೆ. ಅಲ್ಲಲ್ಲಿ ನಡೆದ ಕಿರುಕುಳ ಇರಿತಗಳನ್ನು ಮತ್ತು ಇತರ ಚಿಕ್ಕಪುಟ್ಟ ದುರ್ಘಟನೆಗಳನ್ನು ಬಿಟ್ಟರೆ ಹೇಳಿಕೊಳ್ಳುವಂಥ ದೊಂಬಿಗಳೇನೂ ನಡೆಯದಿದ್ದುದು ಅತ್ಯಂತ ಸಮಾಧಾನದ ಸಂಗತಿಯಾಗಿದೆ. ಪುಂಡರ ಅತ್ಯಾಚಾರಕ್ಕೀಡಾಗಿದ್ದ ಪೂರ್ವ ಬಂಗಾಲ ಬಿಹಾರ ಮೊದಲಾದ ಭಾಗಗಳಲ್ಲಿ ಬಹುಮಟ್ಟಿಗೆ ಶಾಂತತೆ ಪ್ರಸ್ಥಾಪಿತವಾಗಿದೆ. ಪೂರ್ವ ಬಂಗಾಲದಲ್ಲಿ ಶಾಂತತೆಯನ್ನು ಪ್ರಸ್ಥಾಪಿಸಲು, ಅನಾಹುತಕ್ಕೀಡಾದವರನ್ನು ಸಂತೈಸಲು ಮತ್ತು ಅವರ ಭಯಭೀತಿಗಳನ್ನು ಹೋಗಲಾಡಿಸಲು ಶಾಂತಮೂರ್ತಿಗಳಾದ ಮಹಾತ್ಮಾ ಗಾಂಧಿಯವರೆ ಹೋಗಿರುವರು. ಪೀಡಿತ ಪ್ರದೇಶದಲ್ಲೆಲ್ಲ ಅವರು ಸಂಚರಿಸುತಿರುವರು. ಅಲ್ಲಿನ ಹೃದಯದ್ರಾವಕ ದೃಶ್ಯಗಳನ್ನು ನೋಡಿ, ಹೃದಯವಿದಾರಕ ಕತೆಗಳನ್ನು ಕೇಳಿ ಮಹಾತ್ಮರ ಅಂತಃಕರಣ ಕಲಮಲವಾಗಿದೆಂಬುದು ಅವರು ಅಲ್ಲಲ್ಲಿ ಮಾಡುತಿರುವ ಭಾಷಣಗಳಿಂದ ಸ್ಪಷ್ಟವಾಗುವುದು. ದೇಶದಲ್ಲಿನ ಈ ಅಶಾಂತ ಪರಿಸ್ಥಿತಿಯನ್ನು ನೋಡಿ ಅವರಿಗೆ ಭಯಂಕರ ಆಘಾತವಾಗಿದ್ದು ಆದರಿಂದ ಅವರ ತೂಕ ೫ ಪೌಂಡಿನಷ್ಟು ಕಡಮೆಯಾಗಿದೆ. ಇಂಥ ಪರಿಸ್ಥಿತಿಯಲ್ಲಿಯೂ ಅವರು ಪೀಡಿತ ಪ್ರದೇಶದಲ್ಲಿನ ಸಂಚರಿಸುತಿರುವರು. ಅವರೀ ಸಂಚಾರದಿಂದ ಪೂರ್ವ ಬಂಗಾಲದಲ್ಲಿಯ ಮುಸಲ್ಮಾನರ ಮನಸು ಕರಗಿ ಹಿಂದುಗಳು ತಮ್ಮ ಒಡಹುಟ್ಟಿದವರೆಂದು ತಿಳಿದುಕೊಂಡು ಅವರೊಡನೆ ಸಖ್ಯದಿಂದ ನಡೆದರೆ ಮಹಾತ್ಮರು ಇಷ್ಟೊಂದು ಶ್ರಮ ವಹಿಸಿದ್ದು ಸಾರ್ಥಕವಾಗುವದು. ಪೂರ್ವ ಬಂಗಾಲದಲ್ಲಿ ಮಹಾತ್ಮರು ಇಂತು ಸಂಚರಿಸುತಿದ್ದರೆ ಬಿಹಾರದ ಪೀಡಿತ ಭಾಗದಲ್ಲಿ ಪಂಡಿತ ಜವಾಹರಲಾಲ ಡಾ. ರಾಜೇಂದ್ರ ಪ್ರಸಾದ ಮೌ. ಅಬುಲ್ ಕಲಂ ಆಜದ ಮೊದಲಾದ ಮುಖಂಡರು ಸಂಚರಿಸಿ ಶಾಂತ ಪರಿಸ್ಥಿತಿಯನ್ನುಂಟು ಮಾಡಿದರು. ಅನಾಹುತಕ್ಕೀಡಾದ ಈ ಪ್ರದೇಶದಲ್ಲಿ ಉಂಟಾದ ಶಾಂತ ಪರಿಸ್ಥಿತಿಯ ಪರಿಣಾಮ ದೇಶದ ಇತರ ಭಾಗಗಳ ಮೇಲೆಯೂ ಆಗಿ ಅಲ್ಲಿಯೂ ಆದಷ್ಟು ಬೇಗ ಸಂಪೂರ್ಣ ಶಾಂತತೆ ನೆಲಿಸುವದೆಂದು ಆಶಿಸುತ್ತೇವೆ.

### ಮುಸಲ್ಮಾನರಿಗೆ ಜಿನ್ನಾರ ಬಿನ್ನಹ

ಮುಸ್ಲಿಂಲೀಗಿನ ಮುಖಂಡರಾದ ಬ್ಯಾ. ಜಿನ್ನಾಸಾಹೇಬರು ಪ್ರಕಟನೆಯೊಂದನ್ನು ಹೊರಡಿಸಿ ಮುಸಲ್ಮಾನರಿಗೆ ಕೆಲ ಹಿತೋಕ್ತಿಗಳನ್ನು ಹೇಳಿದ್ದಾರೆ. ಬಿಹಾರದಲ್ಲಿ ಮುಸಲ್ಮಾನರು ವಿಪತ್ತಿಗೆ ಗುರಿಯಾಗಿದ್ದಾರೆಂಬುದು ನಿಜ. ಆದರೆ ಮುಸಲ್ಮಾನ ಬಹುಸಂಖ್ಯಾಕರಿದ್ದ ಪ್ರಾಂತದಲ್ಲಿ ಬಿಹಾರದ ಸೇಡು ತೀರಿಸಿಕೊಳ್ಳುವ ಪ್ರವೃತ್ತಿಯಾದರೆ ಅದು ದೊಡ್ಡ ಅನಾಹುತ ಮತ್ತು ನೈತಿಕ, ರಾಜಕೀಯ ದೃಷ್ಟಿಯಿಂದ ಅಪರಾಧ ಮಾಡಿದಂತಾಗುವದು. ನಿಜವಾಗಿ ನಿಮಗೆ ಪಾಕಿಸ್ತಾನ ಬೇಕಿದ್ದರೆ ಬಿಹಾರದಲ್ಲಿ ನಡೆದಂಥ ಅಮಾನುಷ ಮನುಷ್ಯವಧೆಗೆ ಯಾರೂ ಕೈ ಹಾಕತಕ್ಕದ್ದಲ್ಲ. ಮುಸಲ್ಮಾನರು ಬಹುಸಂಖ್ಯಾಕರಿದ್ದಲ್ಲಿ ಹೇಡಿತನದಿಂದ ನಿರಪರಾಧಿ ಜನರನ್ನು ಕೊಲ್ಲುವ ಹೀನಕೃತ್ಯಗಳಿಗೆ ಎಂದೂ ಕೈಹಾಕಬಾರದೆಂದು ನನ್ನ ಮತವಿದೆ. ಎಂದು ಮುಂತಾಗಿ ಅವರು ಸ್ಪಷ್ಟವಾಗಿ ಅಭಿಪ್ರಾಯ ಪಟ್ಟಿದ್ದಾರೆ. ಅವರು ತಮ್ಮ ಪ್ರಕಟನೆಯಲ್ಲಿ ಬಿಹಾರದಲ್ಲಿನ ಅತ್ಯಾಚಾರಗಳನ್ನೇ ಉಲ್ಲೇಖಿಸಿ ನೌಖಾಲಿಯಲ್ಲಿನ ಅತ್ಯಾಚಾರಗಳ ಬಗ್ಗೆ ಚಕಾರ ಶಬ್ದ ತೆಗೆದಿರದಿದ್ದರೂ ಬಹುಸಂಖ್ಯಾಕ ಮುಸಲ್ಮಾನರಿದ್ದಲ್ಲೆಲ್ಲ ಅಲ್ಪಸಂಖ್ಯಾಕರ ಪ್ರಾಣವಿತ್ತಗಳನ್ನು ರಕ್ಷಿಸಬೇಕೆಂದು ಹೇಳಿದ್ದು ಉಚಿತವಾಗಿದೆ. ಮುಸಲ್ಮಾನರು ತಮ್ಮ ಮುಂದಾಳುವಿನ ಈ ಮಹತ್ವದ ಸಲಹೆಯಂತೆ ನಡೆದು ಪುಂಡಾಟಿಕೆಯನ್ನು ಕೂಡಲೇ ನಿಲ್ಲಿಸಬೇಕು. ಸೇಡು ತೀರಿಸಿಕೊಳ್ಳುವ ಪ್ರವೃತ್ತಿಯನ್ನು ಬಿಟ್ಟುಗೊಡತಕ್ಕದ್ದು. ಎಲ್ಲೆಲ್ಲಿಯೂ ಅಲ್ಪಸಂಖ್ಯಾಕರೊಡನೆ ಶಾಂತಿ ಸೌಹಾರ್ದಗಳಿಂದ ಇರಬೇಕು. ಅಂದರೆ ಪರಸ್ಪರರಲ್ಲಿ ಸ್ನೇಹಸೌಹಾರ್ದ ಭಾವನೆ ಬೆಳೆದು ರಾಷ್ಟ್ರದ ಸ್ವಾತಂತ್ರ್ಯ ಸಮೀಪಿಸುವದು. ಕಲಕತ್ತೆಯ ಅನರ್ಥದ ನಂತರವೆ ಬ್ಯಾ. ಜಿನ್ನಾ ಸಾಹೇಬರು ಇಷ್ಟೊಂದು ನಿಃಸಂದಿಗ್ಧ ಶಬ್ದಗಳಲ್ಲಿ ಪ್ರಕಟನೆ ಹೊರಡಿಸಿ ಅಲ್ಲಿನ ಮತ್ತು ಇತರ ಕಡೆಗಳಲ್ಲಿನ ಅತ್ಯಾಚಾರಗಳನ್ನು ಖಂಡಿಸಿದ್ದರೆ ನೌಖಾಲಿಯ ಅನರ್ಥ ಒದಗುತಿರಲಿಲ್ಲೆಂದೆ ಹೇಳಬಹುದಾಗಿದೆ ಬಿಹಾರದ ದುರ್ಘಟನೆಯೂ ನಡೆಯುತಿರಲಿಲ್ಲ. ಇರಲಿ. ಇನ್ನಾದರೂ ದೇಶದಲ್ಲಿನ ಹಿಂದೂ-ಮುಸಲ್ಮಾನ ಮೊದಲಾದ ಜಾತಿಯ ಜನರು ತಮ್ಮ ಮುಖಂಡರ ಸಲಹೆಯಂತೆ ನಡೆದು ದೇಶದಲ್ಲಿ ಶಾಂತಿಯನ್ನು ಪ್ರಸ್ಥಾಪಿಸಿ ಅವರ ಸ್ವಾತಂತ್ರ್ಯವನ್ನು ಸಾಧಿಸಿ ಆತ್ಮೋದ್ಧಾರ ಮತ್ತು ದೇಶೋದ್ಧಾರ ಮಾಡಿಕೊಳ್ಳಬೇಕೆಂದು ಬಿನ್ನವಿಸುತ್ತೇವೆ.

### ಗೋವೆಯಲ್ಲಿ ಸತ್ಯಾಗ್ರಹಿಗಳ ಛಲನೆ

ಗೋವೆಯಲ್ಲಿ ಸತ್ಯಾಗ್ರಹಿಗಳ ಛಲನೆಯ ಸುದ್ದಿಗಳು ಒಂದೇ ಸವನೆ ಬರುತಿವೆ. ಸತ್ಯಾಗ್ರಹಿಗಳನ್ನು ಹಿಡಿದು ತುರಂಗಕ್ಕೆ ಅಟ್ಟುವದಂತೂ ಸರಿಯೆ. ಆದರೆ ಸಂಶಯದಿಂದ ಜನರನ್ನು ಹಿಡಿದು ಪರಕೀಯರೆಂದು ಹಲವರನ್ನು ಹೊರಗಟ್ಟುವುದೂ ಇಲ್ಲವೆ ಸ್ವಕೀಯರೆಂದು ಸ್ಥಾನಬದ್ಧತೆಯಲ್ಲಿಡುವದೂ ನಡೆದಿದೆ. ಇಷ್ಟೇ ಅಲ್ಲ ಸತ್ಯಾಗ್ರಹಿಗಳನ್ನು ವಿಪರೀತ ರೀತಿಯಿಂದ ಛಲಿಸುವುದೂ ನಡೆದಿದೆಂದು ಸುದ್ದಿ. ಈ ಸತ್ಯಾಗ್ರಹವನ್ನು ಹತ್ತಿಕ್ಕಲು ನೀಗ್ರೊ ಸೈನಿಕರನ್ನು ನಿಯಮಿಸಿರುವರೆಂದೂ ಅವರು ಬರ್ಚಿ ಸೂಜಿ ಮೊದಲಾದವುಗಳಿಂದ ತಿವಿದು ಸತ್ಯಾಗ್ರಹಿಗಳನ್ನು ಒಂದೇ ಸವನೆ ಛಲಿಸುತಿರುವರೆಂದೂ ತಿಳಿಯುತ್ತದೆ. ಚಿಕ್ಕ ಬಾಲಕರ ಮೇಲೆಯೂ ಲಾಠಿ ಪ್ರಹಾರ ಯಥಾ ಪ್ರಕಾರ ನಡೆಯುತಿದೆಯಂತೆ ಇದೆಲ್ಲವನ್ನು ನೋಡಿದರೆ ಯಾರಿಗಾದರೂ ಸಂತಾಪವಾಗದಿರದು. ಎಲ್ಲರೂ ಅವರ ಈ ಪ್ರತಿಗಾಮೀ ಧೋರಣವನ್ನು ಖಂಡಿಸದಿರಲಾರರು. ಕೇಂದ್ರ ಶಾಸನ ಸಭೆಯಲ್ಲಿಯೂ ಈ ಪ್ರಶ್ನೆಯೆದ್ದಿತ್ತು. ಆಗ ಪರರಾಷ್ಟ್ರಖಾತೆಯ ವೇಟವರು ಉತ್ತರ ಕೊಡುತ್ತ ಸರಕಾರದವರು ಕಾಯದೆಯ ದೃಷ್ಟಿಯಿಂದ ಈ ಬಗ್ಗೆ ವಿಚಾರ ನಡೆಸಿರುವರು. ಅವಶ್ಯ ಕಂಡ ಉಪಾಯಗಳನ್ನು ಕೈಕೊಳ್ಳುವರು. ಲಿಸ್ಬನ್‌ದಲ್ಲಿಯ ಬ್ರಿಟಿಶ್ ರಾಯಭಾರಿಗಳ ಮುಖಾಂತರ ಈಗಾಗಲೇ ಈ ಮಹತ್ವದ ಘಟನೆಗಳತ್ತ ಪೋರ್ತುಗೀಜ ಸರಕಾರದ ಲಕ್ಷವನ್ನೆಳೆಯುವ ಬಗ್ಗೆ ಚಕ್ರವರ್ತಿ ಸರಕಾರ ಹಿಂದುಸ್ಥಾನ ಸರಕಾರಕಾರಕ್ಕೆ ಕೇಳಿಕೊಂಡಿದೆ. ಅದರ ಫಲಿತಾಂಶದ ದಾರಿ ಈಗ ನೋಡಲಾಗುತ್ತದೆ. ಈ ಸಂಬಂಧದಲ್ಲಿ ಸರಕಾರಕ್ಕೆ ದೊರೆವ ಕಾಯದೆಯ ಸಲಹೆಯನ್ನು ಮುಂದಿನ ಮಾರ್ಗವು ಅವಲಂಬಿಸುತ್ತದೆಂದು ಮುಂತಾಗಿ ಹೇಳಿದರು. ಹಿಂದುಸ್ಥಾನದ್ದೇ ಒಂದು ಭಾಗವಾದ ಪೋರ್ತುಗೀಜ ಗೋವಾದಲ್ಲಿ ಸ್ವಾತಂತ್ರ್ಯ ಚಳವಳಿಯನ್ನು ಹತ್ತಿಕ್ಕಲು ಆ ಸರಕಾರದವರು ನಡೆಸಿದ ಹೇಯ ಪ್ರಯತ್ನವನ್ನು ಎಲ್ಲರೂ ನಿಷೇಧಿಸಬೇಕಾಗಿದೆ. ಅಲ್ಲದೆ ಅಲ್ಲಿನ ಸ್ವಾತಂತ್ರ್ಯ ಚಳವಳಿಗೆ ಸಕ್ರಿಯ ಸಹಾನುಭೂತಿಯನ್ನು ತೋರಿಸಬೇಕಾದುದು ಕರ್ತವ್ಯವಾಗಿದೆ. ಕಾಂಗ್ರೆಸ ಕಾರ್ಯಸಮಿತಿಯವರು ಮತ್ತು ಮಹಾತ್ಮಾ ಗಾಂಧಿಯವರು ಈಗಾಗಲೆ ಇದನ್ನು ಖಂಡಿಸಿದ್ದಾರೆ. ಇಷ್ಟರಿಂದ ಪೋರ್ತುಗೀಜ ಸರಕಾರದವರು ತಮ್ಮ ಧೋರಣವನ್ನು ಬದಲಿಸಿ ಪ್ರಜೆಗಳಿಗೆ ನ್ಯಾಯ್ಯವಾದ ಹಕ್ಕುಬಾಧ್ಯತೆಗಳನ್ನು ಕೊಡದಿದ್ದರೆ ಅವರು ಇಲ್ಲಿಂದ ಗುಡಚಾಪೆ ಕಟ್ಟುವಂತಹ ಚಳವಳಿಯೇ ನಡೆಯುವುದೆಂಬುದು ನಿಶ್ಚಿತ.

### ಮಿರತ ಕಾಂಗ್ರೆಸ್ಸಿನ ಅಧಿವೇಶನ

ಮಿರತದಲ್ಲಿಯೂ ಇರಿತಗಳು ನಡೆದು ಹಲವರು ಸತ್ತದ್ದರಿಂದಲೂ ದೇಶದಲ್ಲಿ ಉಳಿದ ಹಲವಾರು ಕಡೆಗಳಲ್ಲಿಯೂ ದೊಂಬಿ ನಡೆದುದರಿಂದಲೂ ಕಾಂಗ್ರೆಸ್ ಅಧಿವೇಶನವನ್ನು ಮುಂದಕ್ಕೆ ಹಾಕಲಾಗುವುದೆಂಬ ಸುದ್ದಿಯೊಂದು ಪ್ರಕಟವಾಗಿತ್ತು. ಆದರೆ ಕಾಂಗ್ರೆಸ್ ಅಧಿವೇಶನ ಸಕಾಲದಲ್ಲಿ ನಡೆಯುವುದೆಂದು ಅಧಿಕೃತವಾಗಿ ಪ್ರಕಟನೆ ಹೊರಡಿಸಲಾಗಿದೆ. ಆದರೆ ಕಾಂಗ್ರೆಸ್ ಅಧಿವೇಶನದಗೂಡ ಜರಗತಕ್ಕ ಪ್ರದರ್ಶನಗಳು ಪ್ರಾತ್ಯಕ್ಷಿಕೆಗಳು ಮಾತ್ರ ಈ ವರ್ಷ ನಡೆಯುವುದಿಲ್ಲ. ಅಲ್ಲದೆ ಈ ಅಧಿವೇಶನಕ್ಕೆ ಪ್ರೇಕ್ಷಕರಿಗೂ ಪ್ರವೇಶವಿಲ್ಲ. ಕೇವಲ ಕಾಂಗ್ರೆಸ್ ಪ್ರತಿನಿಧಿಗಳು ಮಾತ್ರ ಕೂಡಿ ಅವಶ್ಯಕ ವಿಷಯಗಳ ಚರ್ಚೆ ಮಾಡಿ ಗೊತ್ತುವಳಿಗಳನ್ನು ಕೈಕೊಳ್ಳುವರು. ದೇಶದಲ್ಲಿಯ ಸದ್ಯದ ಘಟನೆಗಳನ್ನು ಮತ್ತು ಸಾಮಾನ್ಯ ಪರಿಸ್ಥಿತಿಯನ್ನು ಲಕ್ಷಿಸಿದರೆ ಕಾಂಗ್ರೆಸ್ ಅಧಿವೇಶನವನ್ನು ಇಂತು ಸಂಕೋಚಗೊಳಿಸಿದ್ದು ಯೋಗ್ಯವೆಂದೇ ಹೇಳಬೇಕಾಗುವದು. ಆಹಾರ ಪರಿಸ್ಥಿತಿಯ ದೃಷ್ಟಿಯಿಂದಲೂ ಇದು ಅವಶ್ಯಕವಾಗಿತ್ತು. ಆದರೆ ಕಳೆದ ಆರೇಳು ವರ್ಷಗಳಿಂದ ಕಾಂಗ್ರೆಸ ಅಧಿವೇಶನ ಕೂಡದ್ದರಿಂದ ಈ ಸಲ ಮಹತ್ವದ ಅನೇಕ ಪ್ರಶ್ನೆಗಳನ್ನು ವಿಚಾರಿಸಿ ನಿರ್ಣಯ ತೆಗೆದುಕೊಳ್ಳಲುಬೇಕಾಗಿದೆ. ಇದೇ ಸಮಯದಲ್ಲಿ ಮಿರತ ಜಿಲ್ಹೆಯ ಗಲಭೆ ಪ್ರದೇಶವೆಂದು ಸಾರಲ್ಪಟ್ಟದ್ದು ಅಲ್ಲಿ ಪುಂಡಾಟಿಕೆ ನಡೆದುದು ದುರ್ದೈವದ ಸಂಗತಿ. ಮುಂದಿನ ಪುಂಡಾಟಿಕೆ ನಿಲ್ಲುವದಕ್ಕೆ ಎಂಥ ಉಗ್ರ ಉಪಾಯ ಕೈಕೊಂಡರೂ ಕ್ಷಮ್ಯವೆ ಎಂದು ಹೇಳಬೇಕಾಗುವುದು. ಕಾಂಗ್ರೆಸ್ ಅಧಿವೇಶನ ಶಾಂತರೀತಿಯಿಂದ ಸಾಗಲೆಂದು ಹಾರೈಯಿಸುತ್ತೇವೆ.

### ಹಿಂ. ಆಸ್ಟ್ರೇಲಿಯಾ ಸಂಬಂಧ

ಹಿಂದುಸ್ಥಾನ ಮತ್ತು ಆಸ್ಟ್ರೇಲಿಯಾಗಳಲ್ಲಿ ವ್ಯಾಪಾರ ಸಂಬಂಧವನ್ನು ಬೆಳೆಸುವ ದೃಷ್ಟಿಯಿಂದ ಆಸ್ಟ್ರೇಲಿಯದ ಔದ್ಯೋಗಿಕ ಶಿಷ್ಟಮಂಡಲವೊಂದು ಹಿಂದುಸ್ಥಾನಕ್ಕೆ ಬಂದಿದೆ. ಹಿಂದುಸ್ಥಾನದ ಪ್ರಮುಖ ವ್ಯಾಪಾರಸ್ಥರ ಗೂಡ ಮತ್ತು ಸರಕಾರದ ಪ್ರತಿನಿಧಿಗಳ ಗೂಡ ವಿಚಾರ ವಿನಿಮಯ ಮಾಡಿ ವ್ಯಾಪಾರ ಸಂಬಂಧವನ್ನು ಬೆಳೆಸಬೇಕೆಂಬುದು ಅವರ ಸಂಚಾರದ ಉದ್ದೇಶವೆಂದು ಹೇಳಬಹುದು. ಯುದ್ಧಾನಂತರ ಜಗತ್ತು ಹೆಚ್ಚು ಸಮೀಪವಾಗಹತ್ತಿದ್ದು ಆಯಾ ರಾಷ್ಟ್ರಗಳಲ್ಲಿ ಸಂಬಂಧವೂ ಬೆಳೆಯಹತ್ತಿದೆ ಜಗತ್ತಿನಲ್ಲಿಯ ಬೇರೆ ಬೇರೆ ರಾಷ್ಟ್ರಗಳು ಪರಸ್ಪರ ಸ್ನೇಹ ಸೌಹಾರ್ದದಿಂದ ಇದ್ದು ಬಾಳಬೇಕೆಂಬ ಭಾವನೆಯೂ ಬೆಳೆದಿದೆ. ಹಿಂದುಸ್ಥಾನ ಆಸ್ಟ್ರೇಲಿಯಾಗಳಲ್ಲಿನ ಸಂಬಂಧವೂ ಇತ್ತೀಚೆ ಹೆಚ್ಚು ಸ್ನೇಹಮಯವಾಗಿದೆ. ಯುದ್ಧ ಕಾಲದಲ್ಲಿ ಹಿಂದೀ ಸೈನಿಕರು ಆಸ್ಟ್ರೇಲಿಯಾದ ರಕ್ಷಣೆಗಾಗಿ ಸುರಿಸಿದ ರಕ್ತಕ್ಕೆ ಪ್ರತಿಯಾಗಿ ಆಸ್ಟ್ರೇಲಿಯಾ ಸರಕಾರದವರು ಗೋದಿಯನ್ನು ಕಳಿಸುತಿರುವರು. ಯುದ್ಧಪೂರ್ವದಲ್ಲಿ ಹಿಂದುಸ್ಥಾನದಿಂದ ಆಸ್ಟ್ರೇಲಿಯಕ್ಕೆ ನೂ. ೨.೮ ರಷ್ಟು ಸರಕುಗಳು ಹೋಗಿದ್ದರೆ ಅಲ್ಲಿಂದ ನೂ. ೧.೪ ದಷ್ಟು ಸರಕು ಬಂದಿತ್ತು. ಆದರೆ ಕಳೆದ ವರ್ಷ ಅಂದರೆ ೧೯೪೫—೪೬ ರಲ್ಲಿ ಈ ಅಂಕಿ ಅನುಕ್ರಮವಾಗಿ ನೂರಕ್ಕೆ ೬.೪ ಮತ್ತು ೮.೩ ರ ವರೆಗೇರಿದೆ. ಇಂದು ಆಸ್ಟ್ರೇಲಿಯದ ಗಿರಾಕಿಗಳಲ್ಲಿ ಹಿಂದುಸ್ಥಾನಪ ಸ್ಥಾನ ಮೂರನೆಯದಿದ್ದು ಕಾಮನ್‌ವೆಲ್ಥ ರಾಷ್ಟ್ರಗಳಿಗೆ ಸರಕುಗಳನ್ನು ಕಳಿಸುವ ರಾಷ್ಟ್ರಗಳಲ್ಲಿ ನಾಲ್ಕನೆಯ ಸ್ಥಾನವನ್ನು ಅದು ಪಡೆದಿದೆ. ೧೯೩೩—೩೪ ರಲ್ಲಿ ಆಸ್ಟ್ರೇಲಿಯದಿಂದ ಹಿಂದುಸ್ಥಾನದ ಆಯಾತ ೭೮೫೮೧೫ ಪೌಂಡು (ಆಸ್ಟ್ರೇಲಿಯನಾಣ್ಯ) ಇದ್ದರೆ ೧೯೪೫—೧೯೪೬ ರಲ್ಲಿ ಇದು ೭೩೫೨೭೨೭ರವರೆಗೇರಿತು. ಹಿಂದುಸ್ಥಾನದ ನಿರ್ಯಾತದ ಅಂಕಿಗಳೂ ೧೯೩೭—೩೮ ರಲ್ಲಿ ೩೧೨೭೯೧೦ ಪೌಂಡು ಇದ್ದರೆ ೧೯೪೫—೪೬ ೧೦೫೫೫೩೬೧ ಕ್ಕೇರಿದೆ. ಈ ರೀತಿ ವ್ಯಾಪಾರ ಅಭಿವೃದ್ಧಿಯಾಗಿದ್ದರೂ ಸ್ಪರ್ಧೆ ಎಲ್ಲಿಯೂ ಕಂಡುಬರುವದಿಲ್ಲ. ಏಕೆಂದರೆ ಹಿಂದುಸ್ಥಾನ ಮಾತ್ರ ಪೂರೈಸಬಹುದಾದ ಸರಕುಗಳು ಆಸ್ಟ್ರೇಲಿಯಾಕ್ಕೆ ಬೇಕಾಗುತಿವೆ. ಮತ್ತು ಹಿಂದುಸ್ಥಾನ ಸಿದ್ಧಮಾಡದಿದ್ದ ಸರಕುಗಳನ್ನೇ ಆಸ್ಟ್ರೇಲಿಯಾ ಇಲ್ಲಿಗೆ ಕಳಿಸುತ್ತದೆ. ಈ ರೀತಿಯಾಗಿ ವ್ಯಾಪಾರ ಸಂಬಂಧ ಬೆಳೆಯುತ್ತ ನಡೆದಂತೆ ಪರಸ್ಪರ ಸ್ನೇಹಸೌಹಾರ್ದಭಾವ ಬೆಳೆಯುತ್ತಿದೆ. ಹಿಂದುಸ್ಥಾನದಲ್ಲಿ ಸಿದ್ಧವಾಗದಿದ್ದ ಸರಕುಗಳನ್ನು ಮಾತ್ರ ಹೊರಗಿನಿಂದ ತರಿಸಿಕೊಳ್ಳುವುದು ಹಿಂದುಸ್ಥಾನ ಸರಕಾರದ ಧೋರಣವಾಗಿರತಕ್ಕದ್ದು. ಹಿಂದಿನ ಸರಕಾರದವರು ಈ ಬಗೆಯ ಧೋರಣವನ್ನು ಇಟ್ಟುಕೊಳ್ಳದ್ದರಿಂದಲೆ ಹಿಂದುಸ್ಥಾನದ ಉದ್ಯೋಗಾಭಿವೃದ್ಧಿಗೆ ತಡೆಯುಂಟಾಗಿತ್ತು. ಆದ್ದರಿಂದ ಹಿಂದುಸ್ಥಾನದ ರಾಷ್ಟ್ರೀಯ ಸರಕಾರದವರು ಈ ಔದ್ಯೋಗಿಕ ಶಿಷ್ಟಮಂಡಳದವರೊಡನೆ ಮಾತುಕತೆ ನಡೆಸುವಲ್ಲಿ ಈ ವಿಷಯದ ಕಡೆಗೆ ಹೆಚ್ಚಾಗಿ ಗಮನ ಕೊಡಬೇಕೆಂದು ಸೂಚಿಸಬಯಸುತ್ತೇವೆ.

ಕೇಂದ್ರ ಶಾಸನ ಸಭೆ

# ಹಿಂದುಸ್ತಾನದಗೂಡ ರಾಯಭಾರ ಸಂಬಂಧಕ್ಕೆ ಮೊಲೊಟೊವರ ಒಪ್ಪಿಗೆ

## ಲಂಚಗುಳಿತನ ನಿರ್ಮೂಲಕ್ಕೆ ಪೋಲೀಸ ಪಡೆಯ ಅವಶ್ಯಕತೆ : ಸಿವಿಲ್ ಸರ್ವಂಟರ ಭವಿತವ್ಯವೇನು ?

### ಸಗೋತ್ರ ವಿವಾಹ ಮಸೂದೆ

೭ ನೆಯ ತಾರೀಕಿನ ದಿವಸ ಕೇಂದ್ರ ಶಾಸನ ಸಭೆಯಲ್ಲಿ ಸಗೋತ್ರ ವಿವಾಹದ ಸಂಬಂಧದಲ್ಲಿ ಡಾ. ದೇಶಮುಖರು ಮಂಡಿಸಿದ ಗೊತ್ತುವಳಿಯ ಮೇಲೆ ಮತ್ತೆ ಚರ್ಚೆ ನಡೆದು ಮತಗಣನೆಯಿಲ್ಲದೆ ಅದು ಸ್ವೀಕೃತವಾಯಿತು. ಒಂದೇ ಗೋತ್ರ ಇಲ್ಲವೆ ಪ್ರವರದವರಲ್ಲಿ ಅಥವಾ ಒಂದೇ ವರ್ಗದ ಬೇರೆ ಬೇರೆ ಉಪವರ್ಗಗಳಲ್ಲಿ ವಿವಾಹಕ್ಕೆ ಅಪ್ಪಣೆ ಕೊಡುವದೆ ಈ ಗೊತ್ತುವಳಿಯ ಮುಖ್ಯಾಶಯ. ಈಗ ಹಿಂದೂ ಸಮಾಜವು ಭರದಿಂದ ಮುಂದೋಡುತಿರುವಾಗ ಅರ್ಥವಿಲ್ಲದ ಹಿಂದಿನ ರೂಢಿಗಳಿಗೆ ಬದ್ಧವಾಗಿದ್ದುಕೊಂಡು ಉತ್ಸಾಹವನ್ನು ಹಾಳುಮಾಡಿಕೊಳ್ಳದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬ ಹಿಂದುವಿನ ಕರ್ತವ್ಯವೆಂದು ಡಾ. ದೇಶಮುಖರು ಚರ್ಚೆಯ ಕಾಲಕ್ಕೆ ಹೇಳಿದರು. ಶ್ರೀ ಪಿ. ಬಿ. ಗೋಳೆಯವರು ಈ ಗೊತ್ತುವಳಿಯನ್ನು ವಿರೋಧಿಸಿ ಪ್ರತಿಯೊಂದು ದೇಶದಲ್ಲಿ ಹಳೆ ಕಾಯದೆ, ರೂಢಿಗಳನ್ನು ಮನ್ನಿಸುವದುಂಟು. ಹಿಂದುಸ್ತಾನ ಒಂದೇ ಅದಕ್ಕೆ ಅಪವಾದವಿದ್ದಂತೆ ತೋರುವದು. ಡಾ. ದೇಶಮುಖರಂಥ ಹಿಂದು ಧರ್ಮದ ಮಿತ್ರರು ಇಂಥ ಮಸೂದೆಯನ್ನು ತಂದು ಹಿಂದೂ ಧರ್ಮಕ್ಕೂ ಧಾರ್ಮಿಕ ಗ್ರಂಥಗಳಿಗೂ ಹೆಚ್ಚಿನ ಅಪರಾಧ ಬಗೆಯುತಿರುವರೆಂದು ಹೇಳಿದರು. ರಾಜಗೋಪಾಲಾಚಾರಿಯವರು ಮಸೂದೆಗೆ ಬೆಂಬಲ ಕೊಟ್ಟರು. ನಮ್ಮ ಧರ್ಮ ಮತ್ತು ಸಂಸ್ಕೃತಿಯನ್ನು ಕಾಯ್ದುಕೊಂಡು ಹೋಗಲು ಎರಡು ಮಾರ್ಗಗಳಿವೆ. ಅದರ ಗಡುಸನ್ನು ಕಾಯ್ದುಕೊಂಡು ಹೋಗುವದು ಮೊದಲನೆಯದು; ಸುತ್ತಲಿನ ವಾತಾವರಣಕ್ಕನುಸಾರವಾಗಿ ಅದು ಹೊಂದಿಕೊಂಡುಹೋಗುವಂತೆ ಅದರಲ್ಲಿ ಅವಶ್ಯಕ ಶೈಥಿಲ್ಯವನ್ನುಂಟುಮಾಡುವದು ಎರಡನೆಯದು. ಸದ್ಯದ ಪರಿಸ್ಥಿತಿಯಲ್ಲಿ ಹಿಂದೂ ಧರ್ಮವನ್ನುಳಿಸಬೇಕಾದರೆ, ಅದನ್ನು ಬಲಪಡಿಸಬೇಕಾದರೆ ಹೆಚ್ಚು ಔದಾರ್ಯದಿಂದ ಅದನ್ನು ಸಡಲಿಸಿ ಸದ್ಯದ ಪರಿಸ್ಥಿತಿ ಮತ್ತು ಭಾವನೆಗಳಿಗನುಗುಣವಾಗಿ ಮಾಡುವದವಶ್ಯವಿದೆಂದು ಹಿಂದುವಾದ ನನಗೆ ವನಿಸುತ್ತದೆಂದು ಹೇಳಿದರು. ಈ ಮಸೂದೆ ಸ್ವೀಕೃತವಾದರೆ ವಿವಾಹ ಬಂಧದ ಪಾವಿತ್ರ್ಯಕ್ಕೆ ಧಕ್ಕೆ ತಟ್ಟುವದೆಂದು ನನಗನಿಸುವದಿಲ್ಲ. ಆದುದರಿಂದ ಕನ್ಯಾಪಿತೃಗಳ ಗೋಳನ್ನು ನೋಡಿಯಾದರೂ ಇದಕ್ಕೆ ಬೆಂಬಲಕೊಡಬೇಕೆಂದು ಮುಂತಾಗಿ ಹೇಳಿದರು. ಈ ಮಸೂದೆಯನ್ನು ಆಯಾ ಪ್ರಾಂತಗಳಿಗೆ ಐಚ್ಛಿಕವಾಗಿಡಬೇಕೆಂದು ಅನಂತಶಯನಂ ಅಯ್ಯಂಗಾರರು ಅಭಿಪ್ರಾಯ ಪಟ್ಟರು. ಗಾಡಗೀಳರು ಮಸೂದೆಗೆ ಬೆಂಬಲ ಕೊಟ್ಟರು. ಶಿದ್ದಿಕಿಯವರು ಶುಭಾಶಯವನ್ನು ಕೋರಿದರು. ಈ ರೀತಿ ಚರ್ಚೆ ನಡೆದು ಮೇಲೆ ಹೇಳಿದಂತೆ ಮಸೂದೆ ಸ್ವೀಕೃತವಾಗಿ ಶಾಸನ ಸಭೆ ಮರುದಿನಕ್ಕೆ ಮುಂದರಿಯಿತು.

### ವಿಮಾನ ಸಾರಿಗೆ ಪ್ರಶ್ನೆ

೮ ನೇ ತಾರೀಕು ನಾಗರಿಕ ವಿಮಾನ ಸಾರಿಗೆಯನ್ನು ಸರಕಾರೀ ರೇಲ್ವೆಗಳಂತೆ ಸರಕಾರವೇ ನಡೆಸಬೇಕು. ಖಾಸಗಿ ಕಂಪನಿಗಳಿಗೆ ಅದನ್ನು ಒಪ್ಪಿಸಬಾರದು ಎಂದು ಸರದಾರ ಮಂಗಲಸಿಂಗರು ಮಂಡಿಸಿದ ಗೊತ್ತುವಳಿಯ ಮೇಲೆ ಚರ್ಚೆ ನಡೆಯಿತು. ಒಳ ಹಾಗು ಹೊರ ಮಾರ್ಗಗಳ ಹಿಂದುಸ್ತಾನದ ವಿಮಾನ ಸಾರಿಗೆಯ ಅಭಿವೃದ್ಧಿಯ ಸಂಬಂಧದಲ್ಲಿ ಸರಕಾರೀ ನಿಯಂತ್ರಣದ ತತ್ವಗಳನ್ನು ಗಮನಿಸಿ ಸರಕಾರ ತನ್ನ ಧೋರಣವನ್ನು ನಿಶ್ಚಯಿಸಲು ಬೇಗನೆ ಉಪಾಯ ಕೈಕೊಳ್ಳಬೇಕು ಎಂದು ದಿವಾಣ ಚಮಣಲಾಲರು ಉಪಸೂಚನೆ ರೂಪವಾಗಿ ಸೂಚಿಸಿದರು. ವಿಮಾನ ಸಾರಿಗೆ ಒಡೆತನ ನಿಯಂತ್ರಣವನ್ನು ಪ್ರಾಂತಿಕ ಸರಕಾರಗಳಿಗೆ ಬಿಡಬೇಕು. ಈ ಬಗ್ಗೆ ಪ್ರಾಂತಿಕ ಸರಕಾರಗಳ ಸಾಕಷ್ಟು ಪ್ರತಿನಿಧಿಗಳುಳ್ಳ ಕೇಂದ್ರ ಸಮಿತಿಯನ್ನು ಏರ್ಪಡಿಸಿ ಯೋಜನೆಯನ್ನು ತಯಾರಿಸಬೇಕೆಂದು ಮುಸ್ಲಿಂಲೀಗಿನವರು ಎರಡು ಉಪಸೂಚನೆಗಳನ್ನು ಮಂಡಿಸಿದರು. ಗೃಹಮಂತ್ರಿಗಳಾದ ಸರದಾರ ಪಟೇಲರು ಸರಕಾರದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ ವಿಮಾನ ಸಾರಿಗೆ ಮೊದಲಾದ ಮಹತ್ವದ ವಿಷಯಗಳ ಬಗ್ಗೆ ಧೋರಣವನ್ನು ನಿಶ್ಚಯಿಸಲು ಸರಕಾರಕ್ಕೆ ಇನ್ನೂ ಅವಕಾಶ ಸಿಕ್ಕಿಲ್ಲೆಂದು ಹೇಳಿ ಚಮಣಲಾಲರ ಉಪಸೂಚನೆಯನ್ನು ಎತ್ತಿಹಿಡಿದರು. ಸೇಟ ಗೋವಿಂದದಾಸರು ಚಮಣಲಾಲರ ಉಪಸೂಚನೆಗೆ ಬೆಂಬಲಕೊಟ್ಟರು. ವಿಮಾನಸಾರಿಗೆ ಸರಕಾರವಶಕ್ಕೆ ಹೋದರೆ ಅವುಗಳ ಬೆಳವಣಿಗೆ ಕುಗ್ಗುವದೆಂದು ಅಹಮ್ಮದ ಜಾಫರರು ಅಂಜಿಕೆಯನ್ನು ವ್ಯಕ್ತಮಾಡಿದರು. ರಾಷ್ಟ್ರೀಕರಣ ಧೋರಣವನ್ನನುಸರಿಸಬೇಕೆಂದು ಮಣಿಬೇನ ಕಾರಾರವರು ಸೂಚಿಸಿದರು. ಸರಕಾರದ ನಿಶ್ಚಿತ ಧೋರಣ ಗೊತ್ತಾದ ಹೊರತು ಸರಕಾರ ಪಕ್ಷದವರು ತಮ್ಮ ಅಭಿಪ್ರಾಯ ವ್ಯಕ್ತಮಾಡುವದು ಸರಿಯಲ್ಲೆಂದು ಸರ್ ಕಾವಸ್ಜಿಯವರು ಸೂಚಿಸಿದರು ದ. ಪ. ಕರಮರಕರರು ಚಮಣಲಾಲರ ಉಪಸೂಚನೆಯನ್ನು ಸಮರ್ಥಿಸುತ್ತ ಅದರಲ್ಲಿ ರಾಷ್ಟ್ರೀಕರಣ ಮಾನ್ಯಮಾಡಲ್ಪಟ್ಟದೆಂದು ಹೇಳಿದರು. ಸನ್ಯಾಲ, ಡಾ. ಝಿಯಾಉದ್ದೀನ, ಅಬ್ದುಲ್ ಗಣಿ, ಎನ್. ಎಂ. ಜೋಶಿ, ಅನಂತಶಯನಂ ಅಯ್ಯಂಗಾರ. ಶಮಸುದ್ದೀನಖಾನ, ಎನ್. ಶಿವರಾಜರವರು ಮಾತಾಡಿದ ಬಳಿಕ ದಿವಾಣ ಚಮಣಲಾಲರು ತಮ್ಮ ಉಪಸೂಚನೆಯನ್ನು ಸಮರ್ಥಿಸಿದರು.

### ಪರಕೀಯರ ನೇಮಕವಿಲ್ಲ

ಕೇಂದ್ರ ಸರಕಾರದ ಅಡಳಿತದಲ್ಲಿರುವ ಸಿವಿಲ್ ಸ್ಥಳಗಳಿಗೆ ಹಿಂದೀಯೇತರರನ್ನು ಅಪವಾದಾತ್ಮಕವಾಗಿ ನೇಮಿಸಿಕೊಳ್ಳಲಾಗುವದು ಅದೂ ಶಕ್ಯವಿದ್ದಷ್ಟು ಕಡಮೆ ಅವಧಿಗಾಗಿ ಎಂದು ಗೃಹಮಂತ್ರಿಗಳು ಇಂದು ಪಾಲೀವಾಲರ ಪ್ರಶ್ನೆಗೆ ಉತ್ತರ ಕೊಡುತ್ತ ಹೇಳಿದರು ಈಗಿರುವ ಹಿಂದೀಯೇತರರ ಅವಧಿ ಮುಗಿದ ಬಳಿಕ ಆ ಸ್ಥಳಗಳಿಗೆ ಹಿಂದಿಯರನ್ನು ನೇಮಿಸಿಕೊಳ್ಳುವದರ ಪರಿಶೀಲನೆ ನಡೆಸಿ ಗೃಹಖಾತೆಯವರು ವರದಿಯನ್ನೊಪ್ಪಿಸಬೇಕೆಂದು ತಿಳಿಸಲಾಗಿದೆಂದೂ ಅವರು ಹೇಳಿದರು. ಅವಧಿ ಮುಗಿದಿದ್ದರೂ ಯುದ್ಧಕಾಲದಲ್ಲಿ ನೇಮಿಸಲ್ಪಟ್ಟ ಎ. ಜೆ. ಡ್ಯಾಶ, ಸರ್ ಪರ್ಸಿ ಮಾರ್ಶ ಸರ್ ಅಲನ್ ಲಾಯಿಡ್ ಮತ್ತು ಸರ್ ಹೆನ್ರಿನಾಯಿಟರು ಮರಳಿ ಹೋಗುವಂತೆ ಸೌಕರ್ಯ ಒದಗಿಸುವ ವಿಚಾರ ನಡೆದಿದೆಂದೂ ಹೇಳಿದರು.

ಸರಕಾರದ ಮಂತ್ರಿಗಳ ಸಂಬಳದಲ್ಲೇನೂ ವ್ಯತ್ಯಾಸವಾಗಿಲ್ಲೆಂದು ಸರದಾರರು ಜಾಫರರ ಪ್ರಶ್ನೆಗೆ ಹೇಳಿದರು. ಈಗ ಮಂತ್ರಿಗಳು ಎಷ್ಟು ತೆಗೆದುಕೊಳ್ಳುತಿರುವರೆಂಬುದು ತಮಗೆ ಗೊತ್ತಿಲ್ಲೆಂದೂ ಅವರು ನುಡಿದರು. ಸರಕಾರೀ ಬೆಂಚಗಳಲ್ಲಿದ್ದ ಮರೊಬ್ಬರು ೫೫೦೦ ರೂ. ಎಂದು ತಿಳಿಸಿದ ಮೇರೆಗೆ ಸರದಾರರೂ ಹಾಗೆ ಹೇಳಲಾಗುತ್ತಿದೆಂದು ನುಡಿದರು. ಕಾಯದೇ ವಿರುದ್ಧ ಚಟುವಟಿಕೆಗಳಲ್ಲಿ ಭಾಗ ವಹಿಸಿದ ನೋಕರಿಯ ಉಮೇದ್ವಾರರೂ ಇನ್ನುಮುಂದೆ ಹಾಗು ಮಾಡುವದಿಲ್ಲೆಂಬ ಪ್ರಶಸ್ತಿ ಪತ್ರಿಕೆ ತರುವ ಅವಶ್ಯಕತೆಯಿಲ್ಲೆಂದು ಹೇಳಿದರು.

ದಾಯಿಗಳ ಕೆಲಸದ ಹೊರತು ಬೇರೆ ಕೆಲಸಕ್ಕೆ ತರುಣಿಯರನ್ನು ಸೈನ್ಯಖಾತೆಯಲ್ಲಿ ತೆಗೆದುಕೊಳ್ಳುವ ವಿಚಾರ ಸರಕಾರದ್ದಿಲ್ಲೆಂದು ಹೇಳಲಾಯಿತು.

ಹಿಂದುಸ್ತಾನದಲ್ಲಿ ವರ್ಷಕ್ಕೆ ಸರಾಸರಿ ೬೦೦ ಲಕ್ಷ ಮಣ ಉಪ್ಪು ಹೊರಡಿಸಲ್ಪಡುತಿದೆ. ಅದರಲ್ಲಿ ೨೦೦ ಲಕ್ಷ ಮಣ ಸರಕಾರಿ ಗಜನಿ ಮುಖಾಂತರ ಹೊರಡುವದು. ಕಳೆದ ಎರಡು ವರ್ಷಗಳಲ್ಲಿ ಸರಾಸರಿ ೫೦ ಲಕ್ಷ ಮಣ ಉಪ್ಪು ಆಯಾತ ಮಾಡಲಾಗಿದೆಂದು ಹೇಳಿದರು. ಸೈನ್ಯದ ರಾಷ್ಟ್ರೀಕರಣದ ಯೋಜನೆ ಬೇಗನೆ ತಯಾರಿಸಲಾಗುವದೆಂದು ಹೇಳಲಾಯಿತು.

ಬ್ರಿಟನ್‌ದಲ್ಲಿ ಭಾರತದ ಅಸ್ತಿಯೇನೂ ಇಲ್ಲ. ಆದರೆ ಖಾಸಗಿ ವ್ಯಕ್ತಿಗಳೂ ಸಂಸ್ಥೆಗಳೂ ಗಳಿಸಿದ ಆಸ್ತಿ ಶ್ರೀ ದಿವಾಣ ಚಮಣಲಾಲರು ಹೇಳುವಂತೆ ಸುಮಾರು ೧೦೦ ಕೋಟಿ ಪೌಂಡುಗಳಷ್ಟಿದೆ. ಭಾರತವು ಆಹಾರಧಾನ್ಯ ಮುಂತಾದವುಗಳ ಬಗ್ಗೆ ಇತರ ರಾಷ್ಟ್ರಗಳಿಗೆ ಕೊಡಬೇಕಾಗಿರುವ ಹಣ ಒಟ್ಟು ಸುಮಾರು ೪೯ ಕೋಟಿ ರೂಪಾಯಿಗಳಷ್ಟಾಗಿದೆಂದು ಮನುಸುಭೇದಾರರಿಗೆ ಅರ್ಥಮಂತ್ರಿಗಳು ಹೇಳಿದರು.

ಹಳ್ಳಿಗಳಿಗೆ ವೈದ್ಯಕ ಸಹಾಯ ಕೊಡುವದನ್ನು ಹೆಚ್ಚಿಸಲಾಗಿದೆ. ಮದ್ರಾಸದಲ್ಲಿ ಹಳ್ಳಿಗಳಲ್ಲಿ ೨೬೦ ಅಸ್ಪತ್ರೆಗಳೂ ೪೫೦ ಆರೋಗ್ಯ ಕೇಂದ್ರಗಳೂ ೪೫ ಪ್ರಾದೇಶಿಕ ಕೇಂದ್ರಗಳೂ ಇವೆ. ಮುಂಬಯಿ ಪ್ರಾಂತದಲ್ಲಿ ಸರಕಾರಿ ಧನಸಹಾಯ ಪಡೆದು ದುಡಿಯುವ ೧೦೦ ಅಸ್ಪತ್ರೆಗಳಿವೆ. ಇದಲ್ಲದೆ ೩೩೦ ಹೊಸ ಡಾಕ್ಟರರೂ ದುಡಿಯುತಿದ್ದಾರೆ ಎಂದು ಹೇಳಲಾಯಿತು.

### ನಿಯಂತ್ರಣದ ಅವಶ್ಯಕತೆ

ಕೆಲವು ಅವಶ್ಯಕ ಪದಾರ್ಥಗಳ ಮೇಲಿನ ನಿಯಂತ್ರಣಗಳನ್ನು ಇನ್ನೂ ಮುಂದೆ ಸಾಗಿಸುವ ಬಗ್ಗೆ ಪೂರೈಕೆ ಮಂತ್ರಿಗಳಾದ ಡಾ. ಜಾನ್ ಮಥಾಯರು ಮಂಡಿಸಿದ ಮಸೂದೆಯ ಮೇಲೆ ೧೧ ನೇ ತಾರೀಕು ಚರ್ಚೆ ನಡೆಯಿತು. ನಿಯಂತ್ರಣಗಳು ಅತ್ಯವಶ್ಯ. ಆದರೆ ಕೇವಲ ನಿಯಂತ್ರಣಗಳಿಂದ ಬಡವರಿಗೆ ಯೋಗ್ಯ ಬೆಲೆಯಲ್ಲಿ ಪದಾರ್ಥಗಳು ಸಿಕ್ಕದಿರುವ ಮೂಲಕ ಅವರಿಗೆ ಧನಸಹಾಯ ಮಾಡುವ ಯೋಜನೆಯನ್ನು ಸರಕಾರದವರು ಮಾಡಬೇಕೆಂದು ಶ್ರೀ ಕರಮರಕರರು ಸೂಚಿಸಿದರು.

ಅಬ್ದುಲ್ ರಹಿಮಾನ ಸಿದ್ದೀಕಿಯವರು ಮಾತ್ರ ಇದನ್ನು ವಿರೋಧಿಸಿ ನಿಯಂತ್ರಣವನ್ನು ಕಿತ್ತಿಹಾಕಬೇಕೆಂದೂ ಕೆಲವರು ಸತ್ತರೂ ಚಿಂತೆಯಿಲ್ಲ, ಹಲವು ವ್ಯಾಪಾರಸ್ಥರು ದಿವಾಳಿ ತೆಗೆದರೂ ಅಡ್ಡಿಯಿಲ್ಲ; ನಿಯಂತ್ರಣಗಳನ್ನು ನಿರ್ಮೂಲಗೊಳಿಸಿ ನಾಗರಿಕನಿಗೆ ಅವನ ಸ್ವಾತಂತ್ರ್ಯ ಕೊಡಿರಿ. ಬೆಲೆಗಳು ದಿಕ್ಕೆಟ್ಟು ಏರಿದರೆ ವ್ಯಾಪಾರಸ್ಥರ ವಿರುದ್ಧ ಹರತಾಳ ಮಾಡೋಣ, ಅಥವಾ ಅವಶ್ಯವೆನಿಸಿದರೆ ಈಗಿನಂತೆ ದಂಗೆ ಹಾಕೋಣ ಎಂದು ಮುಂತಾಗಿ ಆವೇಶಯುಕ್ತರಾಗಿ ಹೇಳಿದರು. ಜಾನ ಮಥಾಯಿಯವರು ಆಕ್ಷೇಪಕರಿಗೆ ತಕ್ಕ ಉತ್ತರ ಕೊಟ್ಟರು. ಮೂರನೇ ವಾಚನದ ಚರ್ಚೆ ನಡೆದಾಗಲೆ ಸಭೆ ಮುಂದರಿಯಿತು.

ಧಾರಣ ಮಾಡುವವನಿಗೇ ಹಣ ಕೊಡಬೇಕೆಂದು ವಿಧಿಸುವ ಪ್ರಾಮಿಸರಿ ನೋಟುಗಳನ್ನು ಬ್ಯಾಂಕುಗಳು ಹೊರಡಿಸದಂತೆ ಪ್ರತಿಬಂಧಿಸುವ ರಿಝರ್ವ್ ಬ್ಯಾಂಕ ತಿದ್ದುಪಡಿ ಮಸೂದೆ ಸ್ವೀಕೃತವಾಯಿತು.

### ತಂತಿ ಸೌಕರ್ಯ

ತಂತಿ ಸೌಕರ್ಯ, ಗುತ್ತಿಗೆ ಮುಂತಾದವುಗಳ ಬಗ್ಗೆ ಕೇಳಿದ ಪ್ರಶ್ನೆಗಳಿಗೆ ಅಸಫಅಲ್ಲಿಯವರು ಉತ್ತರ ಕೊಡುತ್ತ ಇದರಲ್ಲಿ ಯಾವದೇ ಬಗೆಯ ಪಕ್ಷಪಾತ ಧೋರಣ ವಹಿಸಿಲ್ಲ. ಈ ಸಂಬಂಧದಲ್ಲಿ ಸರಕಾರ ವಿಚಾರ ನಡೆಸಿದ್ದು ನಿಶ್ಚಿತ ಧೋರಣ ಸ್ವೀಕರಿಸಲಾಗುವದು ಎಂದು ಹೇಳಿದರು. ದಿಲ್ಲಿ ಮತ್ತು ಮದ್ರಾಸಗಳ ನಡುವೆ ದ್ವಿವಾರ ಅಂಚೆ ಗಾಡಿಯನ್ನು ಎಪ್ರಿಲದಲ್ಲಿ ಪ್ರಾರಂಭಿಸುವದು ಶಕ್ಯವಿದೆಯೊ ಹೇಗೆಂಬದನ್ನು ತಿಳಿಸಲು ಅಧಿಕಾರಿಗಳಿಗೆ ಕೇಳಕಾಗಿದೆಂದು ತಿಳಿಸಲಾಯಿತು.

ರೇಲ್ವೆಗಳಲ್ಲಿ ಹಿಂದು ಮುಸಲ್ಮಾನ ಎಂಬ ವಿಶೇಷಣಗಳಿಂದ ನೀರು ಚಹ ಅಥವಾ ತಿನಸುಗಳನ್ನು ಮಾರುವ ಪದ್ಧತಿಗೆ ಕೂಡಲೆ ತಡೆಹಾಕಬೇಕೆಂದು ಸರಕಾರದ ರೇಲ್ವೆಗಳಿಗೆ ತಿಳಿಸಲಾಗಿದೆಂದು ಮನುಸುಭೇದಾರರ ಪ್ರಶ್ನೆಗೆ ಉತ್ತರ ಕೊಡಲಾಯಿತು. ಕೆಲವು ನ್ಯಾಯಾಸ್ಥಾನಗಳಲ್ಲಿ ಪ್ರತಿಯೊಬ್ಬ ತನ್ನ ಜಾತಿಯನ್ನು ಉಲ್ಲೇಖಿಸಬೇಕೆಂಬುದು ಪ್ರೊಸೀಜರ ಕೋಡ ನೋಡಲು ಅನವಶ್ಯಕವೆಂದು ತೋರುತ್ತದೆ. ಸರಕಾರಕ್ಕೆ ಪತ್ರ ಅಥವಾ ಅರ್ಜಿಯನ್ನು ಸಲ್ಲಿಸುವಾಗ ಜಾತೀಯ ಉಲ್ಲೇಖ ಅವಶ್ಯವೆಂದು ರಲ್ಲಿಲ್ಲ ಎಂದು ಕಾಯದೆ ಮಂತ್ರಿಗಳಾದ ಮಂಡಳರು ಮನುಸುಭೇದಾರರ ಇನ್ನೊಂದು ಪ್ರಶ್ನೆಗೆ ಉತ್ತರ ಕೊಟ್ಟರು.

೧೯೪೧ ರಿಂದ ೪೫ ರ ವರೆಗೆ ಕೈಮಗ್ಗದ ಬಟ್ಟೆಗಳನ್ನು ಹಿಡಿದು ಒಟ್ಟು ೩೦ ಸಾವಿರ ಲಕ್ಷ ವಾರ ಬಟ್ಟೆ ತಯಾರಾಯಿತು. ಇದರಲ್ಲಿ ೩೦೦೦ ಲಕ್ಷ ವಾರ ಬಟ್ಟೆಯನ್ನು ಸರಕಾರ ಸೈನ್ಯ ಖಾತೆಯ ಸಲುವಾಗಿ ಉಪಯೋಗಿಸಿತು. ೧೩೦೦ ಲಕ್ಷ ವಾರ ಬಟ್ಟೆಯನ್ನು ಪ್ರಮಾಣಿತ ಬಟ್ಟೆಯ ಯೋಜನೆಗಾಗಿ ಉಪಯೋಗಿಸಲಾಯಿತು. ಈ ವರ್ಷ ಸೈನ್ಯ ಖಾತೆಗಾಗಿ ೮೦೦೦೦ ಲಕ್ಷ ವಾರ ಬಟ್ಟೆ ಬೇಕಾಗಬಹುದು. ದಿನಾಲು ೮ ಗಂಟೆ ಮಾತ್ರ ಕೆಲಸ ನಡೆಯುತಿರುವದರಿಂದ ೭೦೦ ಲಕ್ಷ ವಾರದಷ್ಟು ಬಟ್ಟೆ ಕಡಮೆ ಹೊರಡುತ್ತದೆಂದು ಚಮಣಲಾಲರ ಪ್ರಶ್ನೆಗೆ ಉತ್ತರ ಕೊಡಲಾಯಿತು.

ದೊಂಬಿ ಪ್ರದೇಶದಲ್ಲಿ ರೇಲ್ವೆ ರಕ್ಷಣೆಗೆ ಸ್ಪೆಶಲ್ ಪೋಲೀಸ ದಳವನ್ನಿದಲಾಗಿತ್ತೆಂದು ಡಾ. ಝಿಯಾಉದ್ದೀನರ ಪ್ರಶ್ನೆಗೆ ಉತ್ತರ ಕೊಡಲಾಯಿತು.

೧೯೪೫-೪೬ ರ ಅವಧಿಯಲ್ಲಿ ರೇಲ್ವೆಗಳಲ್ಲಿ ಕಳೆಸಲಾದ ಸರಕುಗಳ ನಾಶ ಅಥವಾ ಹಾನಿಯ ಬಗ್ಗೆ ೧ ಕೋಟಿ ೫೯ ಲಕ್ಷ ರೂಪಾಯಿ ಪರಿಹಾರ ಕೊಡಬೇಕಾಯಿತು. ೧೯೪೦-೪೧ ರಲ್ಲಿ ಇದೇ ಕಾರಣಕ್ಕಾಗಿ ೭ ಲಕ್ಷ ೮೦ ಸಾವಿರ ರೂಪಾಯಿ ಮಾತ್ರ ಕೊಡಲಾಗಿತ್ತು.

### ಹಿಂದುಸ್ತಾನ-ರಶಿಯ ಸಂಬಂಧ

ಹಿಂದುಸ್ತಾನ ರಶಿಯಗಳ ರಾಯಭಾರ ಸಂಬಂಧದಲ್ಲಿ ರಶಿಯನ್ ವಿದೇಶ ಮಂತ್ರಿ ಮೊಲಟೋವರು ಅನುಕೂಲರಿರುವರು ಈ ವಿಷಯವು ಮುಂದಿನ ಡಿಸೆಂಬರದಲ್ಲಿ ಮಾಸ್ಕೋದಲ್ಲಿ ಚರ್ಚೆಯಲ್ಲಿ ಬರಲಿದೆ ಎಂದು ಮುಂತಾಗಿ ವಿದೇಶ ಮಂತ್ರಿ ಪಂಡಿತ ಜವಾಹರಲಾಲರು ಅಹಮದ ಜಾಫರರು ಕೇಳಿದ ಪ್ರಶ್ನೆಗೆ ಉತ್ತರ ಕೊಟ್ಟರು. ಲಂಡನ ಮತ್ತು ಇತರ ಕಡೆಗಳಲ್ಲಿ ವಿದೇಶಿ ಸರಕಾರಗಳ ಪ್ರತಿನಿಧಿಗಳನ್ನು ನನ್ನ ಪರವಾಗಿ ಭೆಟ್ಟಿಯಾಗಿ ನಡುಗಾಲ ಸರಕಾರದ ಶುಭಾಶಯಗಳನ್ನರುಹಲು ಶ್ರೀಕೃಷ್ಣ ಮೆನನ್‌ರನ್ನು ಕಳುಹಿಸಿತ್ತು. ಪ್ಯಾರೀಸಿನಲ್ಲಿರುವ ರಶಿಯದ ವಿದೇಶ ಮಂತ್ರಿ ಮೊಲಟೋವರನ್ನು ಭೆಟ್ಟಿಯಾಗಲೂ ಹೇಳಿತ್ತು. ಆಹಾರ ಪೂರೈಕೆಯಲ್ಲಿ ಸಹಾಯ ಮಾಡಲು ಅವರನ್ನು ಬಿನ್ನವಿಸಲಾಗಿತ್ತು. ಕೃಷ್ಣ ಮೆನನ್‌ರಿಗೆ ಸಂಬಳ ಕೊಡುವದಿಲ್ಲ. ಹಿಂದೀ ಪ್ರತಿನಿಧಿ ಮಂಡಳದ ಸದಸ್ಯರಾಗಿರುವಾಗ ಇತರ ಸದಸ್ಯರಿಗೆ ಕೊಡುವಷ್ಟು ಭತ್ತೆಯನ್ನು ಅವರಿಗೆ ಕೊಡಲಾಗುವದು. ಮೆನನ್‌ರ ವರದಿಯನ್ನು ಸಭೆಯ ಮುಂದಿಡಬೇಕೆಂಬ ಪ್ರಶ್ನೆಗೆ ಗುಪ್ತ ಕಾಗದಗಳನ್ನು ಸಭೆಯ ಮುಂದಿಡುವ ಪರಿಪಾಠವಿಲ್ಲೆಂದು ಹೇಳಲಾಯಿತು.

### ಲಂಚಗುಳಿತನದ ನಿರ್ಮೂಲನ

೧೩ ನೇ ತಾರೀಕಿನ ದಿವಸ ನಾಲ್ಕು ಮಸೂದೆಗಳ ಚರ್ಚೆ ನಡೆಯಿತು. ಕೆಲವು ಅವಶ್ಯಕ ಪದಾರ್ಥಗಳ ಮೇಲಿನ ನಿಯಂತ್ರಣವನ್ನು ಮುಂದೆ ಸಾಗಿಸುವ ಡಾ. ಜಾನಮಥಾಯರ ಮಸೂದೆ ಸ್ವೀಕೃತವಾಯಿತು. ವಿದೇಶ ಹಣ ವಿನಿಮಯ ವ್ಯವಹಾರಗಳ ಮೇಲೆ ನಿರ್ಬಂಧ ಕೂಡಿಸುವ ಮಸೂದೆಯನ್ನು ಅರ್ಥ ಸಚಿವರು ಮಂಡಿಸಿ ಅದನ್ನು ಹೆಚ್ಚಿನ ವಿಚಾರಣೆಗಾಗಿ ಪರಿಶೀಲಕ ಸಮಿತಿಗೆ ಒಪ್ಪಿಸಬೇಕೆಂದು ಪ್ರತಿಪಾದಿಸಿದರು. ಗೃಹಮಂತ್ರಿಗಳಾದ ಸರದಾರ ವಲ್ಲಭಭಾಯಿರು ದಿಲ್ಲಿ ಪೋಲೀಸ ದಲದ ಅಸ್ತಿತ್ವದ ಅವಧಿಯನ್ನು ಹೆಚ್ಚಿಸುವ ಮಸೂದೆಯನ್ನು ಸೂಚಿಸಿದರು.

—೧೯ನೇ ಪುಟಕ್ಕೆ



# ಅಂತರ್ ರಾಷ್ಟ್ರೀಯ

### ಯುಕ್ತರಾಷ್ಟ್ರಗಳ ಸಭೆ

ಯುಕ್ತರಾಷ್ಟ್ರ ಸಭೆಯಲ್ಲಿ ಹಿಂದುಸ್ತಾನವು ಪ್ರಾಮುಖ್ಯ ಭಾಗವನ್ನು ವಹಿಸತೊಡಗಿದೆ. ಬ್ರಿಟಿಶರ ಕೈಗೂಸುಗಳಾಗಿ ಹೋದವರಿಗೂ ಹಿಂದುಸ್ತಾನದ ಜನತೆಯ ಪ್ರತಿನಿಧಿಗಳಾಗಿ ಹೋದವರಿಗೂ ಇರುವ ತಾರತಮ್ಯ ಸ್ಪಷ್ಟವಾಗಿ ಒಡೆದು ಕಾಣುವಂತಾಗಿದೆ ಯುಕ್ತರಾಷ್ಟ್ರ ಸಂಘಕ್ಕೆ ಹೊಸ ಸದಸ್ಯರನ್ನು ಸೇರಿಸಿಕೊಳ್ಳುವ ವಿಚಾರದಲ್ಲಿಯಾಗಲಿ, ಸಾಮ್ರಾಜ್ಯವಾದಿ ವಿಸ್ತರಣೆಯನ್ನು ವಿರೋಧಿಸುವವರಲ್ಲಾಗಲಿ ಅದು ತನ್ನದೇ ಆದ ಸ್ವತಂತ್ರ ನ್ಯಾಯ್ಯ ಧೋರಣೆಯನ್ನು ಅನುಸರಿಸಿದೆ. ಶ್ರೀಮತಿ ವಿಜಯಲಕ್ಷ್ಮಿ ಪಂಡಿತರ ಹಾಗು ಅವರ ಸಹಯೋಗಿಗಳ ಸಬಲ ಪ್ರತಿಪಾದನೆಯಿಂದ ದಕ್ಷಿಣಆಫ್ರಿಕಾ ಹಿಂದೀಯರ ಪ್ರಶ್ನೆಯನ್ನು ಹಾರಿಸಿಬಿಡುವ ಜನರಲ್ ಸ್ಮಟ್ಸರ ಪ್ರಯತ್ನ ವಿಫಲವಾದುದು ಈಗಾಗಲೆ ನಮಗೆ ಗೊತ್ತಿದೆ. ಹಿಂದೀ ಪ್ರತಿನಿಧಿಗಳು ದಕ್ಷಿಣ ಆಫ್ರಿಕೆಯ ವರ್ಣಮದೋನ್ಮತ್ತ ಸರಕಾರಕ್ಕೆ ಹೆಚ್ಚು ಹೆಚ್ಚು ಬಿಸಿ ಹತ್ತುವಂತೆ ತಮ್ಮ ಅಭಿಯೋಗವನ್ನು ಮುಂದೊತ್ತಿದ್ದಾರೆ. ನೈರುತ್ಯ ಆಫ್ರಿಕೆಯನ್ನು ದಕ್ಷಿಣ ಆಫ್ರಿಕೆಯಲ್ಲಿ ಸೇರಿಸಿಕೊಳ್ಳುವದಕ್ಕೆ ಯುಕ್ತರಾಷ್ಟ್ರಸಭೆಯ ಅನುಮತಿಯನ್ನು ದಕ್ಷಿಣ ಆಫ್ರಿಕೆಯ ಜನರಲ್ ಸ್ಮಟ್ಸರು ಕೋರಿದಾಗ ಹಿಂದೀ ಪ್ರತಿನಿಧಿಗಳಾದ ಸರ್ ಮಹಾರಾಜ ಸಿಂಗರು ಅದನ್ನು ತೀಕ್ಷ್ಣವಾಗಿ ವಿರೋಧಿಸಿರು. ಮೊದಲನೆ ಮಹಾಯುದ್ಧಕ್ಕಿಂತ ಮೊದಲು ಜರ್ಮನಿಯ ವಸಾಹತಾಗಿದ್ದ ನೈರುತ್ಯ ಆಫ್ರಿಕೆಯನ್ನು ಆ ಯುದ್ಧದ ನಂತರ ದಕ್ಷಿಣ ಆಫ್ರಿಕೆಯ ಆದೇಶಕ್ಕೆ ಒಪ್ಪಿಸಲಾಗಿತ್ತು. ಈಗ ಅಲ್ಲಿರುವ ಯುರೋಪಿಯನ್ನರ ಬೆಂಬಲವನ್ನು ಗಳಿಸಿ ಆ ಭೂಭಾಗವನ್ನೆ ತಮ್ಮ ರಾಜ್ಯದಲ್ಲಿ ಸೇರಿಸಿಕೊಳ್ಳಲು ಸ್ಮಟ್ಸರ ದುರಾಶೆ. ಹಿಂದೀ ಪ್ರತಿನಿಧಿಗಳೂ ಇದನ್ನು ವಿರೋಧಿಸಿ ಬಿಳಿಯರಲ್ಲದವರನ್ನು ಕುರಿತು ದಕ್ಷಿಣ ಆಫ್ರಿಕೆಯ ನಡೆವಳಿ ಚೆನ್ನಾಗಿಲ್ಲದ್ದರಿಂದ ಅನೇಕ ಮೂಲ ನಿವಾಸಿಗಳುಳ್ಳ ಈ ದೇಶವನ್ನು ದ. ಆಫ್ರಿಕೆಯ ಯುರೋಪಿಯನ್ನರಿಗೊಪ್ಪಿಸಬಾರದೆಂದು ಸ್ಪಷ್ಟವಾಗಿ ಸಾರಿದರು. ಅಲ್ಲಿಯ ಜನರೆಲ್ಲರ ಮತವನ್ನು ಗಣಿಸಿ ಸ್ಮಟ್ಸರು ಅವರ ಒಪ್ಪಿಗೆ ಪಡೆದು ಬರಲೆಂದು ಆಹ್ವಾನ ಕೊಡಲಾಗಿದೆ. ಹೀಗಾಗಿ ಅತ್ತಿಂದಿತ್ತ ತೂನೆಯುತಿದ್ದ ಅನೇಕ ರಾಷ್ಟ್ರಗಳು ಈಗ ವರ್ಣಮತ್ಸರಿಗಳ ವಿರೋಧಕ್ಕೆ ನೆರೆದಿದ್ದು ತಮ್ಮ ಕೆಲಸ ಸಾಧಿಸಿಕೊಳ್ಳಲು ಸ್ಮಟ್ಸರಿಗೆ ಅವಶ್ಯವಿರುವಷ್ಟು ಮತಗಳು ಸಿಗುವ ಸಂಭವವಿಲ್ಲವೆಂದು ಗೊತ್ತಾಗಿದೆ. ರಶಿಯಾವೂ ಸ್ಮಟ್ಸರ ವಿರುದ್ಧ ನಿಂತಿದೆ. "ಪ್ರಭಾವಶಾಲಿ" ರಾಷ್ಟ್ರಗಳಿಂದ ಸ್ಮಟ್ಸರು ಹಿಂದುಸ್ತಾನಕ್ಕೆ ಹೇಳಿಸಿ ನೋಡಿದರು. ಆದರೆ ಸ್ವತಂತ್ರತೆಯ ಹೊಣೆಯರಿತ ಹಿಂದೀಯರು ಅವರನ್ನು ಲಕ್ಷಿಸಿಲ್ಲ.

ಹೊಸ ರಾಷ್ಟ್ರಗಳನ್ನು ಸಂಘಕ್ಕೆ ಸೇರಿಸಿಕೊಳ್ಳುವ ವಿಷಯದಲ್ಲಿಯೂ ಹಿಂದುಸ್ತಾನ ಸ್ವತಂತ್ರ ಮಾರ್ಗವನ್ನೆ ಅವಲಂಬಿಸಿತು. ಈ ವಿಷಯದಲ್ಲಿ ಹಿಂದಿನಂತೆ ಸೋವಿಯಟ್ ಮತ್ತು ಪಾಶ್ಚಿಮಾತ್ಯ ಹೀಗೆರಡು ಬಣಗಳು ಇವೆ. ಟ್ರಾನ್ಸಜಾರ್ಡನ್ ಆಯರ್ಲಂಡ್, ಪೋರ್ತುಗಾಲುಗಳ ಪ್ರವೇಶವನ್ನು ಸೋವಿಯಟ್ ಪ್ರತಿನಿಧಿಗಳು ವಿರೋಧಿಸಿದರೆ, ಅಲ್ಬೇನಿಯಾದ ಪ್ರವೇಶಕ್ಕೆ ಅಂಗ್ಲೋ ಅಮೇರಿಕನ್ನರು ಅಡ್ಡಗಾಲಿಕ್ಕಿದರು. ಹೀಗೆ ಈ ಎಲ್ಲ ರಾಷ್ಟ್ರಗಳು ಪ್ರವೇಶ ದೊರೆಯದೆ ನಿರಾಶವಾದವು. ಯಾರ ವಿರೋಧವೂ ಇಲ್ಲದೆ ಸ್ವೀಡನ, ಆಯಿಸಲಂಡ್ ಮತ್ತು ಅಫಗಾಣಿಸ್ತಾನ ಇವುಗಳಿಗೆ ಪ್ರವೇಶ ಸಿಕ್ಕಿತು. ಹಿಂದೀ ಪ್ರತಿನಿಧಿಗಳು ಎರಡೂ ಬಣಗಳಿಂದ ದೂರ ಉಳಿದರು. ಅವರು ಪೋರ್ತುಗಾಲ ಹೊರತು ಬೇರೆಲ್ಲ ರಾಜ್ಯಗಳ ಪ್ರವೇಶ ಅರ್ಜಿಗಳಿಗೆ ಬೆಂಬಲವಿತ್ತರು. ಪೋರ್ತುಗಾಲದ ಸರ್ವಾಧಿಕಾರ ಪದ್ಧತಿಯನ್ನೂ ಅವರು ಗೋವೆಯಲ್ಲಿ ನಡೆಸಿರುವ ಅತ್ಯಾಚಾರವನ್ನೂ ತೀಕ್ಷ್ಣವಾಗಿ ಖಂಡಿಸಿದರು.

ವಿಶ್ವಸ್ತಿಕೆಯ ಪ್ರಶ್ನೆ ದೊಡ್ಡ ಆಕಾರದಲ್ಲಿ ಉದ್ಭವಿಸಿದೆ. ಸೋವಿಯಟ್ ಪ್ರತಿನಿಧಿಗಳು ಒಂದು ದೀರ್ಘ ಪ್ರಕಟನೆಯನ್ನು ಹೊರಡಿಸಿ ವಿಶ್ವಸ್ತರಾಷ್ಟ್ರಗಳು ತಮ್ಮ ಕೈಯೊಳಗಿರುವ ರಾಜ್ಯಗಳ ವಿಶ್ವಸ್ತಿಕೆಯ ಯೋಜನೆಗಳನ್ನು ಇನ್ನೂ ಸಿದ್ಧಪಡಿಸದಿದ್ದುದನ್ನು ಟೀಕಿಸಿದ್ದಾರೆ. ಬ್ರಿಟಿಶರ ವಿಶ್ವಸ್ತಿಕೆಯ ಯೋಜನೆಯನ್ನೂ ಕಟುವಾಗಿ ಟೀಕಿಸಿ ಅವರು ಪಾಲಿಸ್ತಾನ ಪ್ರಶ್ನೆಯನ್ನು ಒಳಗಿಂದೊಳಗೆ ಬಿಡಿಸುವ ಬ್ರಿಟಿಶ ತಂತ್ರವನ್ನು ಬಯಲಿಗೆಳೆದಿದ್ದಾರೆ.

### ಅಮೇರಿಕನ್ ರಾಜಕಾರಣ

ಈಗೊಂದು ವಾರದ ಕೆಳಗೆ ಅಮೇರಿಕೆಯಲ್ಲಿ ನಡೆದ ದ್ವಿವಾರ್ಷಿಕ ಚುನಾವಣೆಗಳ ಪರಿಣಾಮವಾಗಿ ಎಷ್ಟೋ ವರ್ಷಗಳಿಂದ ಮೂಲೆಗುಂಪಾಗಿ ಕುಳಿತಿದ್ದ ರಿಪಬ್ಲಿಕನ್ ಪಕ್ಷಕ್ಕೆ ಪ್ರಚಂಡ ವಿಜಯ ದೊರಕಿತು. ರೂಜವೆಲ್ಟರ ಪ್ರಚಂಡ ವ್ಯಕ್ತಿತ್ವ ಬಲದಿಂದ ಈಗ ೧೪ ವರ್ಷಗಳಿಂದ ಅಧಿಕಾರವನ್ನು ಅವ್ಯಾಹತವಾಗಿ ಅನುಭವಿಸಿದ ಡೆಮಾಕ್ರೆಟಿಕ ಪಕ್ಷಕ್ಕೆ ಸೋಲು ಪ್ರಾಪ್ತವಾಯಿತು. ರೂಜವೆಲ್ಟರ ಅಕಾಲ ಮರಣದಿಂದ ಅಮೇರಿಕೆಯ ಇತಿಹಾಸದ ದಿಕ್ಕೇ ಬದಲಿಸಿತೆಂದು ಭವಿಷ್ಯತ್ ಇತಿಹಾಸಕಾರನು ಬರೆದರೂ ಬರೆಯ ಬಹುದು. ಈ ಚುನಾವಣೆಗಳಿಂದ ವಿಚಿತ್ರ ಪರಿಸ್ಥಿತಿಯೊಂದು ಉತ್ಪನ್ನವಾಗಿದೆ. ಅಮೇರಿಕನ್ ಕಾಂಗ್ರೆಸ್ಸಿನಲ್ಲಿ ( ಶಾಸನ ಸಭೆ ) ಈಗ ರಿಪಬ್ಲಿಕನ್ನರ ಬಹುಮತವಾಗಿದೆ. ಆದರೆ ಅಧ್ಯಕ್ಷರು ಡೆಮೊಕ್ರೆಟರು. ಪ್ರತಿಕೂಲವಾದ ಶಾಸನ ಸಭೆಯನ್ನೆದುರಿಸಿ ಅಧ್ಯಕ್ಷ ಟ್ರೂಮನ್ನರು ಇನ್ನೆರಡು ವರ್ಷ, ಎಂದರೆ ೧೯೪೮ರಲ್ಲಿ ಅಧ್ಯಕ್ಷ ಚುನಾವಣೆ ಮತ್ತು ಇನ್ನೊಂದು ಮಹಾಚುನಾವಣೆ ಆಗುವ ವರೆಗೆ ಆಡಳಿತೆಯನ್ನು ಸಾಗಿಸಬೇಕು. ಅದು ಎತ್ತು ಎರೆಗೆಳೆದರೆ ಕೋಣ ಕೆರೆಗೆಳೆದ ರೀತಿಯಲ್ಲಿ ಸಾಗುವದು. ಅದರಿಂದ ಅಧ್ಯಕ್ಷರ ಜನಪ್ರಿಯತೆ ಪೂರ್ತಿ ಹಾಳಾಗಿ ಮುಂದಿನ ಚುನಾವಣೆಯಲ್ಲಿ ಅವರ ಸೋಲು ನಿಶ್ಚಿತವಾಗುವದು. ಮೊನ್ನೆ ಅಧ್ಯಕ್ಷ ಟ್ರೂಮನ್ನರು ಹೊರಡಿಸಿದ ಹೇಳಿಕೆಯೂ ಈ ಭಯವನ್ನೆ ವ್ಯಕ್ತಗೊಳಿಸಿದೆ. ಈ ಪರಿಸ್ಥಿತಿಯನ್ನು ಕೆಲವರು ತಮ್ಮ ಸ್ವಂತ ಪ್ರತಿಷ್ಠೆಯನ್ನು ಮೆರೆಸಲು ಉಪಯೋಗಿಸಿಕೊಂಡರೆ ಪರಿಣಾಮ ಭಯಂಕರವಾದೀತೆಂದು ಅವರುದೇಶಕ್ಕೆ ತಿಳಿಸಿದ್ದಾರೆ. ಅಧ್ಯಕ್ಷರಿಗೆ ಪ್ರತಿಕೂಲ ಶಾಸನ ಸಭೆಯನ್ನು ಎದುರಿಸುವ ಪ್ರಸಂಗ ಬಂದುದು ಇದು ಮೊದಲನೆ ಸಲವಲ್ಲ. ಆದರೆ ಇಂದು ಅಂತರ್‌ರಾಷ್ಟ್ರೀಯ ಪರಿಸ್ಥಿತಿ ಬೆಕ್ಕಿನ ತಲೆಯ ಮೇಲೆ ದೀಪವಿಟ್ಟಂತೆ ಇದೆ. ಇದರಿಂದ ಈ ವಿಚಿತ್ರ ಅಮೇರಿಕನ್ ಸ್ಥಿತಿಯಿಂದ ಸ್ಥಿರವಾದ ಒಂದು ಧೋರಣೆ ವಹಿಸಲು ಅಧ್ಯಕ್ಷರಿಗೆ ಅಸಾಧ್ಯವಾಗಬಹುದು. ಅದಕಾಗಿಯೆ ಟ್ರೂಮನ್ನರು ತಮ್ಮ ವಿದೇಶ ಧೋರಣ ಉಭಯ ಪಕ್ಷಗಳಿಗೂ ಸಮ್ಮತವಾದಂತೆ ಸಾಗುತಿದೆಯೆಂದೂ ಅದಕ್ಕೆ ಬೆಂಬಲ ಬೇಕೆಂದೂ ಪ್ರಾರ್ಥಿಸಿದ್ದಾರೆ. ವಿದೇಶ ಧೋರಣೆ ಇದ್ದಂತೆ ಉಳಿಯುವದೆಂದು ಅವರು ಸಾರಿದ್ದರೂ ಬಂಡವಳಗಾರರಾದ ರಿಪಬ್ಲಿಕನ್ನರ ಒತ್ತಡದಿಂದ ಅದು ಇನ್ನಷ್ಟು ರಶಿಯಾ ವಿರೋಧಿಯಾಗುತ್ತ ಹೋಗಬಹುದಲ್ಲದೆ ಇಂಗ್ಲಂಡಿನ ಕೂಲಿಕಾರ ಪಕ್ಷದ ಸಾಮ್ಯವಾದಿ ಯೋಜನೆಗೂ ಅದು ಸಾಧ್ಯವಿದ್ದಷ್ಟು ಕಲ್ಲುಹಾಕದಿರದು.

### ಫ್ರೆಂಚ ಚುನಾವಣೆ

ಮೊನ್ನೆ ಆದಿತ್ಯವಾರ ನಡೆದ ಫ್ರೆಂಚ ಮಹಾಚುನಾವಣೆಗಳ ಪರಿಣಾಮ ಯುರೋಪಿನಲ್ಲಿ ಆಂಗ್ಲೋ-ಅಮೇರಿಕನ್ನರ ಪ್ರತಿಷ್ಠೆ ಇಳಿಯುತಿರುವದರ ದ್ಯೋತಕವೆಂದು ಅರ್ಥ ಮಾಡಿದರೆ ತಪ್ಪಾಗಲಾರದು. ಫ್ರಾನ್ಸಿನಲ್ಲಿ ಕಮ್ಯುನಿಸ್ಟರ ಪ್ರತಿಷ್ಠೆ ಬೆಳೆಯುತಿದೆಯೆಂದು ಅದರಿಂದ ಸಿದ್ಧವಾಗಿದೆ. ಈ ವರೆಗೆ ಎರಡನೆ ಸ್ಥಾನದಲ್ಲಿದ್ದ ಕಮ್ಯುನಿಸ್ಟ ಪಕ್ಷ ಈಗ ಪ್ರಥಮ ಸ್ಥಾನಕ್ಕೇರಿದೆ. ಅವರು ೧೭೦ ಸ್ಥಾನಗಳನ್ನು ಗಳಿಸಿರುವರು. ಡಿ ಗಾಲೆಯ ಎಂ. ಆರ್. ಪಿ. ಅಥವಾ ಕೆಥೋಲಿಕ ಪಕ್ಷಕ್ಕೆ ೧೬೦ ಸ್ಥಾನಗಳೂ ಸಾಮ್ಯವಾದಿಗಳಿಗೆ ೯೫ ಸ್ಥಾನಗಳೂ ಎಡಪಕ್ಷದ ರಿಪಬ್ಲಿಕನ್ನರಿಗೆ ೫೧ ಸ್ಥಾನಗಳೂ ಸಿಕ್ಕಿವೆ. ಹೀಗೆ ಒಟ್ಟಿನ ಮೇಲೆ ಕಮ್ಯುನಿಸ್ಟರೂ ಸಾಮ್ಯವಾದಿಗಳೂ ಸೇರಿದರೆ ಅವರಿಗೆ ಹೊಸ ಶಾಸನಸಭೆಯಲ್ಲಿ ನಿಚ್ಚಳ ಬಹುಮತ ಇದೆ. ಆದಕ್ಕಾಗಿ ನಾಲ್ಕನೆ ರಿಪಬ್ಲಿಕ್ಕಿನ (ಅಂದರೆ ಹೊಸ ಘಟನೆಯನ್ವಯ ಸ್ಥಾಪಿತವಾದ ರಾಜ್ಯ ಪದ್ಧತಿ) ಪ್ರಥಮ ಅಧ್ಯಕ್ಷ ಪದವಿಯನ್ನು ಕಮ್ಯುನಿಸ್ಟರು ಸಾಮ್ಯವಾದಿಗಳಿಗೆ ಕೊಡಮಾಡಿದಾರೆಂದೂ ಕಮ್ಯುನಿಸ್ಟರ ಪ್ರಭಾವವುಳ್ಳ ಮಂತ್ರಿಮಂಡಲವನ್ನು ಡಿಗಾಲೆ ಪಕ್ಷವನ್ನು ಹೊರಗಿಟ್ಟೇ ಸ್ಥಾಪಿಸಬಹುದೆಂದೂ ತಿಳಿಯುತ್ತದೆ.

ಯುರೋಪಿನಲ್ಲಿ ರಶಿಯನ್ ಬಣಕ್ಕೆದುರಾಗಿ ಡೆಮೊಕ್ರಾಟಿಕ ಬಣವೊಂದನ್ನು ಕಟ್ಟುವ ಬ್ರಿಟಿಶರ ಆಶೆ ಈ ಚುನಾವಣೆಯಿಂದ ಇನ್ನಷ್ಟು ದೂರ ಹೋದಂತಾಗಿದೆ. ಏಕೆಂದರೆ ಫ್ರೆಂಚ ಬೆಂಬಲವಿಲ್ಲದ ಯಾವುದೇ ಯುರೋಪಿಯನ್ ಕೂಡುಕಟ್ಟು ನಿರರ್ಥಕವಾಗದೆ ಇರಲಾರದು. ಪರಿಣಾಮವಾಗಿ ಈ ಎರಡು ಬಣಗಳ ಸಂಬಂಧ ಇನ್ನಷ್ಟು ಕೆಡಬಹುದು.

### ಬ್ರಿಟಿಶ ಧೋರಣೆ

ಮೊನ್ನೆ ಮಂಗಳವಾರ ಬ್ರಿಟಿಶ ಚಕ್ರವರ್ತಿಗಳು ಪಾರ್ಲಮೆಂಟಿನಲ್ಲಿ ಭಾಷಣ ಮಾಡಿ ಮುಂದಿನ ವರ್ಷದ ಕೂಲಿಕಾರ ಸರಕಾರದ ಧ್ಯೇಯ ಧೋರಣೆಗಳನ್ನು ವಿವರಿಸಿದರು. ಅಂತರಿಕ ವಿಷಯದಲ್ಲಿ ವಾಹನ-ಸಾರಿಗೆ, ವಿದ್ಯುತ್ ಈ ಉದ್ಯೋಗಗಳು ರಾಷ್ಟ್ರೀಕರಿಸಲ್ಪಡುವವೆಂದು ಅವರು ಹೇಳಿದರು. ವಿದೇಶ ಧೋರಣೆಯ ಬಗ್ಗೆ ಅಂತರ್‌ರಾಷ್ಟ್ರೀಯ ಸಹಕಾರವೇ ಧೋರಣೆಯೆಂದರು. ಹಿಂದುಸ್ತಾನದಲ್ಲಿ ಮಂತ್ರಿತ್ರಯ ಯೋಜನೆಯನ್ನೆ ಮುಂದೆ ಸಾಗಿಸಲಾಗುವದು. ಬ್ರಹ್ಮದೇಶದಲ್ಲಿ ಬರುವವರ್ಷ ಚುನಾವಣೆಯಾಗುವದೆಂದು ಸಾರಿದರು. ವಿರೋಧಿ ಪಕ್ಷದ ಚರ್ಚಿಲ್ಲರು ಪಾಲಿಸ್ತಾನದ ಹೊಣೆಯನ್ನು ಇನ್ನು ಬ್ರಿಟಿಶ ಸರಕಾರ ಹೊರಬಾರದೆಂದೂ ಅದನ್ನು ಅಂತರ್ರಾಷ್ಟ್ರೀಯ ವಿಶ್ವಸ್ತಿಕೆಗೆ ಬಿಡಬೇಕೆಂದೂ ಹೇಳಿದರು. ರಶಿಯಾದೊಡನೆ ದಿನದಿನಕ್ಕೆ ಸಂಬಂಧ ಕೆಡುತಿರುವದನ್ನು ಕಂಡು ಅವರು ಶೋಕಿಸಿದರು. ಆದರೆ ಕೆಲ ದಿನಗಳ ಹಿಂದೆ ಚರ್ಚಿಲ್ಲರು ಅತಿದೊಡ್ಡ ಜಗಳಗಂಟರೆಂದು ಸ್ಟಾಲಿನ್ನರೆಂದುದು ಅವರಿಗೆ ಮರೆತು ಹೋಗಿದೆಯೋನೋ.

—೧೧ನೇ ಪುಟಕ್ಕೆ

# ರಶಿಯಾ ಮುಂದಿನ ಯುದ್ಧವನ್ನು ಜಯಿಸಬಹುದು

(ಮೊದಲನೆ ಪುಟದಿಂದ ಮುಂದರಿದುದು)

ಬ್ರಿಟನ್ನವೊ ? ಇರಬಹುದು. ಬೆವಿನ್ನರು ಎಲ್ಲ ಮಹತ್ವದ ಮುದ್ದೆಗಳ ಮೇಲೆ ಬಾಯಿರನ್ಸರ ಸಂಗಡ ಸಹಕರಿಸುತ್ತಲೇ ಇದ್ದಾರೆ. ಆದರೂ ಬ್ರಿಟನ್-ಅಮೇರಿಕಗಳ ಒಕ್ಕಟ್ಟಿಗೆ ಧಕ್ಕೆ ತಗಲುವಂಥ ಪ್ರಶ್ನೆಗಳು ಉದ್ಭೂತವಾಗುತ್ತವೆ. ಅದೆಂದರೆ, ಬ್ರಿಟನಕ್ಕೆ ಸಾಲಕೊಡಬೇಕಾದರೆ ಅಮೇರಿಕನಕಾಂಗ್ರೆಸ್ಸು ಆರು ತಿಂಗಳುಗಳ ವರೆಗೆ ಒಳ್ಳೆ ತುರುಸಿನ ಹಾಗೂ ಕಟುಶಬ್ದಗಳಿಂದ ( ರಶಿಯಕ್ಕೆ ಮೀಸಲಾಗಿಟ್ಟ ಶಬ್ದಗಳಿಂದ ) ಚೈಯ್ಯುವ ಸಭೆಯನ್ನು ಜರಗಿಸಿದ್ದನ್ನು ನೆನಪಿಗೆ ತಂದರೆ ಕೆಡಕೆನಿಸುತ್ತದೆ. ಬಹುಶಃ ಎಲ್ಲ ಪತ್ರಿಕೆಗಳು ಬ್ರಿಟಿಶರ ಪಾಲಿಸ್ತಾನ ರೀತಿನೀತಿಯನ್ನು ತೆಗಳುವ ಸಂಪೂರ್ಣ ಒಂದು ಪುಟದ ಜಾಹಿರಾತನ್ನು ಪ್ರಕಟಿಸುತ್ತವೆ. ಅವು ಬ್ರಿಟಿಶರನ್ನು ಕೊಲೆಗಡಕರು ಹಾಗೂ ಜನಮತವನ್ನು ಲೆಕ್ಕಿಸದೆ ಆಳುವವರೆಂದು ಹೀಯಾಳಿಸುತ್ತವೆ. ಜಾಗತಿಕ ಬಣವನ್ನು ನಿರ್ಮಿಸಬೇಕಾದರೆ ಈಗಿದ್ದ ಬ್ರಿಟಿಶ್ ಸಾಮ್ರಾಜ್ಯವನ್ನು ತೊಡೆದು ಹಾಕುವದು ಅತಿ ಮಹತ್ವದ್ದೆಂದು ಅಮೇರಿಕನ್ ಲಿಬಿರಲ ಹಾಗೂ ಕಾಂಝರ್ವೆಟಿವ್ಹರ ಮತ. ಜನದ ಅಭಿಮತವೇನಿದ್ದರೂ ಅಮೇರಿಕೆಯು ಬ್ರಿಟಿಶ್‌ರನ್ನು ಬಲಪಡಿಸುವದಕ್ಕೆ ಯಾವದೇ ಪ್ರಯತ್ನ ಮಾಡಿದರೂ ಅದು ತೆಗಳಲ್ಪಡುವದು. ಅಂಗ್ಲೋ—ಅಮೇರಿಕನ್ನರ ಸಹಕಾರವು ಯಾವಾಗಲೂ ಮುರಿದು ಬೀಳುವ ಭೀತಿಯಲ್ಲಿಯೇ ಇರುವದು. ಆದರೂ ಬ್ರಿಟನ್ನದ ಪಶ್ಚಿಮ ಬಣ ಹಾಗೂ ಅದರ ಕೈಕೆಳಗಿನ ರಾಷ್ಟ್ರಗಳ ಬಣವನ್ನು ಒಪ್ಪೋಣ. ಮುಂದೇನು? ಫ್ರಾನ್ಸವು ನಮ್ಮನ್ನು ಸೇರುವದೇ ? ಅದರ ಸಹಾಯ ಅವಶ್ಯ. ಪ್ರಜಾತಂತ್ರ ಬಣವನ್ನು ಕಟ್ಟಬೇಕೆನ್ನುವವರು ಅದರ ಸಹಾಯ ಪಡೆಯಲೇಬೇಕು. ಹೀಗಿದ್ದರೂ ಅದರ ಸಹಾಯವು [illegible] ಫ್ರಾನ್ಸದಲ್ಲಿ ಎರಡನೆಯ ದೊಡ್ಡ [illegible] ಕಮ್ಯುನಿಸ್ಟ ಪಕ್ಷವು. ಅದು ಬಲಹೀನವಾಗುವ ಲಕ್ಷಣವಿಲ್ಲ. ಈಗಿನ ಫ್ರೆಂಚ ಸರಕಾರದಲ್ಲಿ ಮತ್ತು ಔದ್ಯೋಗಿಕ ಕಾರ್ಖಾನೆಗಳಲ್ಲಿ ಅತಿ ಮಹತ್ವದ ಸ್ಥಾನಗಳನ್ನು ಕಮ್ಯುನಿಸ್ಟರು ಆಕ್ರಮಿಸಿರುವರು. ಅಮೇರಿಕೆಗಿಂತಲೂ ಬ್ರಿಟನ್ನವು ಫ್ರಾನ್ಸದಲ್ಲಿ ಅಪ್ರಿಯವಾಗಿದೆ. ಆದರೆ ರಶಿಯವು ಬಲಾಢ್ಯವಾದ ಜರ್ಮನಿಯನ್ನು ಮುಂದೆ ಮಾಡಿದರೆ ಫ್ರಾನ್ಸವು ಅನಿವಾರ್ಯವಾಗಿ ಬ್ರಿಟನ್—ಅಮೇರಿಕೆಗಳಿಗೆ ಬಾಯ್ಬಿಡಬೇಕಾಗುತ್ತದೆ. ಫ್ರಾನ್ಸಕ್ಕೆ ರಶಿಯಕ್ಕೆಂತ ಅಮೇರಿಕನ್ ಸಾಮ್ರಾಜ್ಯದ ಹೆದರಿಕೆಯೇ ಹೆಚ್ಚಾಗಿರುವದು. ಫ್ರೆಂಚರ ಸಹಾಯವು ಕಡೆತನಕ ಬಾಳುವದು ಮೂಲಭೂತ ತತ್ವಗಳನ್ನು ಅವಲಂಬಿಸದೆ ಕಾಲ ಪರಿಸ್ಥಿತಿಗನುಗುಣವಾದದ್ದಿರುತ್ತದೆ. ವಿಲ್ಸನ್ನನು ೧೯೧೯ ರಲ್ಲಿ ಫ್ರಾನ್ಸಿನ ಸುರಕ್ಷಿತತೆಯ ಬಗ್ಗೆ ಭರವಸೆಯ ವಚನವನ್ನಿತ್ತಿದ್ದನು. ಆ ಒಪ್ಪಂದ ಕರಾರನ್ನು ಸಿನೇಟಕ್ಕೆ ಕಳುಹಿಸುವಷ್ಟು ಕೂಡ ಯೋಗ್ಯವಲ್ಲೆಂದು ಬಿಟ್ಟನು. ಪುನಃ ೧೯೪೦ ರಲ್ಲಿ ಫಾನ್ಸವು ಅತಿ ಸಂಕಟ ಸಮಯದಲ್ಲಿದ್ದಾಗ ಅಮೇರಿಕೆಯು ಅದರ ಸಹಾಯಕ್ಕೆ ಹೋಗಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಬ್ರಿಟನ್ ಅಮೇರಿಕೆಗಳ ಸಹಾಯದ ಭರವಸೆಯ ಮಾತ್ರದಿಂದಲೇ ಫ್ರಾನ್ಸವು ರಶಿಯದ ರೋಷಕ್ಕೆ ಪಾತ್ರವಾಗಲೊಪ್ಪಬಹುದೋ ? ಫ್ರಾನ್ಸದಂತೆಯೇ ಇಟಲಿಯ ಪರಿಸ್ಥಿತಿಯು. ಇಟಲಿಯಲ್ಲಾದರೂ ಕಮ್ಯುನಿಸ್ಟ ಪಕ್ಷವು ಎರಡನೇ ದೊಡ್ಡ ಪಕ್ಷ. ಸಂಕಟ ಸಮಯಗಳು ಒದಗಿದರೆ ಅದು ಕಮ್ಯುನಿಸ್ಟರ ಕೈವಾರಿಯಾಗಬೇಕಾಗುತ್ತದೆ. ಬ್ರಿಟನ್ನು ಇಟಲಿಯ ಮಿತ್ರರ ಅಫ್ರಿಕೆಯ ವಸಾಹತುಗಳನ್ನು ತನ್ನ ಅಧಿಕಾರದಲ್ಲಿರಿಸುವದರಿಂದ ವೈರತ್ವ ಹಾಗೂ ವಿಕಲ್ಪಗಳಿಗೆ ಹೆಚ್ಚಿನ ಅಸ್ಪದ ಸಿಕ್ಕಿದೆ. ಬ್ರಿಟಿಶ್—ಅಮೇರಿಕನ್ ಸೈನಿಕರೇ ಇಟಲಿಯನ್ನು ದಾಳಿಮಾಡಿ ಪಾದಾಕ್ರಾಂತ ಮಾಡಿಕೊಂಡವರು. ರಶಿಯವು ಎಷ್ಟೇ ಭೀಕರವಾಗಿದ್ದರೂ ಬ್ರಿಟಿಶ—ಅಮೇರಿಕನ್ನರೇ ನಿಜವಾದ ಆಕ್ರಮಣಶೀಲರು ಗೆದೆಯುವವರು ಹಾಗೂ ಹಾಳುಗೆಡವುವವರೆಂಬ ಕಲ್ಪನೆಯಿದೆ.

ಇನ್ನು ಉಳಿದ ಯುರೋಪಿಯನ್ ಸಂಣ ರಾಷ್ಟ್ರಗಳ ಪಾಡೇನು ? ಇಂಥ ರಾಷ್ಟ್ರಗಳು ಅಮೇರಿಕೆಯ ಮೈತ್ರಿಯಿಂದ ಸಹಾಯದ ಆಶೆಯಿಂದ ರಶಿಯದ ಕೂಡ ಯುದ್ಧವನ್ನು ಎದುರಿಸುವವೆಂದು ವಿಚಾರಮಾಡಿದರೆ ಮೂರ್ಖತನದ ಪರಮಾವಧಿಯಲ್ಲದೆ ಏನು? ಜರ್ಮನಿಯು ದುರ್ಬಲವಾಗಿ ಮಿತ್ರರಕಡೆಗಿದ್ದೂ ನಿರುಪಯೋಗ. ರಶಿಯನ್ನರ ಸಹಾಯದಿಂದಲೇ ಜರ್ಮನಿಯು ಬಲಿಷ್ಠವಾಗಬಲ್ಲದು. ಜರ್ಮನಿಯು ವಿಚ್ಛಿನ್ನವಾಗಿರಬೇಕು. ಹಾಗು ಉಪಯುಕ್ತವಾಗಬೇಕು. ಅದರಂತೆ ಫ್ರಾನ್ಸವಾದರೂ ನಮ್ಮ ಬಣದಲ್ಲಿರಬೇಕೆಂದರೆ ನಮಗೆ ಸಂಣ ರಾಷ್ಟ್ರಗಳ ಸಹಾಯದ ಹೊರ್ತು ಗತ್ಯಂತರವಿಲ್ಲ. ಝುಕೋಸ್ಲೊವಾಕಿಯಾ ಮತ್ತು ಅಸ್ಟ್ರಿಯಾಗಳು ರಶಿಯದ ದಾಳಿಯಿಂದ ಹಾನಿಗೀಡಾಗುವವೆಂದು ಹೇಳುವದು ಬೇಕಿಲ್ಲ. ಇನ್ನು ಉಳಿದವುಗಳೆಂದರೆ ಸ್ಪೇನ ಹಾಗೂ ಪೋರ್ತುಗಾಲ. ಅವು ಈ ಬಣವನ್ನು ಸೇರದಿರುವದೆಂದರೆ ಮೂರ್ಖತನವಾಗುವದು.

ನಾವು ರಶಿಯ ವಿರೋಧಿ ಸಂಘಟನೆಯಲ್ಲಿ ಲ್ಯಾಟಿನ್ ಅಮೇರಿಕೆಯನ್ನು ಗಣಿಸೋಣವೇ ? ಕೆಲವರು ಹಾಗೆ ಮಾಡಲಿಕ್ಕೆ ಬರುವದಿಲ್ಲೆನ್ನುತ್ತಾರೆ. ಅಲ್ಲಿ ಹಬ್ಬುತ್ತಲಿರುವ ಕಮ್ಯುನಿಸ್ಟ ಪ್ರಚಾರ ಮತ್ತು ಹಿಂದಿನ ಇತಿಹಾಸಗಳನ್ನು ನೋಡಿದರೆ ದಕ್ಷಿಣ ಅಮೇರಿಕೆಯ ಸಹಾಯವನ್ನು ನಂಬುವಂತಿಲ್ಲ. ಮೊದಲಿನಿಂದಲೂ ಸರ್ವಾಧಿಕಾರತ್ವಕ್ಕೆ ಒಳಪಟ್ಟ ಲ್ಯಾಟಿನ್ ಅಮೇರಿಕೆಯು ಎತ್ತ ಕಡೆಗಾದರೂ ಜೋತಾಡಬಹುದು. ಫಾಸಿಝಂಕ್ಕೆ ಇಲ್ಲವೆ ಕಮುನಿಝಂಕ್ಕೆ. ಯಾವ ದಿಶೆಯಲ್ಲಿ ಹೋದರೂ ಪ್ರಜಾಸತ್ತಾತ್ಮಕ ಬಣಕ್ಕೆ ಧಕ್ಕೆ ಬರದಿರಲಾರದು. ಪ್ರಾಚ್ಯ ರಾಷ್ಟ್ರಗಳಲ್ಲಿಯ ಪರಿಸ್ಥಿತಿಯಂತೂ ಇದಕ್ಕಿಂತ ಹೆಚ್ಚು ಧೈರ್ಯಗುಂದುವ ಹಾಗಿದೆ. ಜಪಾನವನ್ನು ಪ್ರಜಾಸತ್ತಾತ್ಮಕ ಮಾಡಿದರೂ ನಾವು ಅದನ್ನು ನಮ್ಮ ಬಣದಲ್ಲಿ ಸೇರಿಸಲು ಸಿದ್ಧರೇ ? ಅದೊಂದು ದುರ್ಬಲ ಸಂಯೋಗವಾಗುವದು. ಚೀನದ ರಾಷ್ಟ್ರೀಯ ಸರಕಾರಕ್ಕೆ ಉತ್ತರದಲ್ಲಿಯ ಕಮ್ಯುನಿಸ್ಟರನ್ನು ಬಗ್ಗು ಬಡೆಯಲು ಸಹಾಯ ಮಾಡುತ್ತಲೇ ಇದ್ದೇವೆ. ಇದರಿಂದ ಚೀನದ ಕಮ್ಯುನಿಸ್ಟರ ಅತೃಪ್ತಿಗೆ ಪಾತ್ರರಾಗಿದ್ದೇವೆ. ಪೂರ್ವದಲ್ಲೆಲ್ಲ ಅಮೇರಿಕನ್ನರು ಅದಕ್ಕಿಂತಲೂ ಹೆಚ್ಚಾಗಿ ಬ್ರಿಟಿಶರು ರಶಿಯನರಷ್ಟೇ ವಿಶ್ವಾಸಘಾತಕರಾಗಿದ್ದಾರೆ.

## ನಾವು ಕೊಡಮಾಡಬೇಕಾದದ್ದೇನು ?

ನಾವು ಪೌರ್ವಾತ್ಯ ದೇಶಗಳಿಗೆ ನಿಜಕ್ಕೂ ಕೊಡಬೇಕಾದದ್ದೇನು? ನಾವು ಯಾವದೇ ವಿಚಾರವನ್ನು ತಲೆಯಲ್ಲಿ ತುಂಬಿಕೊಂಡರೂ ಚೀನಿಯರೂ ಹಿಂದೀಯರೂ ಬರ್ಮೀ ಜನರು ಇಂಡೋನೇಶಿಯಾದವರೂ ಸಿಯಾಮಿಯವರೂ ಸತತವಾಗಿ ಒಂದು ನೂರು ವರ್ಷಗಳ ವರೆಗೂ ತಮ್ಮ ರಾಷ್ಟ್ರಗಳನ್ನು ಪಾಶ್ಚಿಮಾತ್ಯರೆ ಸುಲಿದರೆಂಬುದನ್ನು ಮರೆಯಲಾರರು!! ಈಗ ರಶಿಯವು ಝಾರಿಸ್ಟ ಉಳಿದಿಲ್ಲ. ನಾವು ಇಲ್ಲಿಯವರೆಗೆ ಪ್ರತಿಪಾದಿಸದೆ ಇದ್ದ ಕಮ್ಯುನಿಸ್ಟ ತತ್ವಗಳಿಗೆ-ಜನಾಂಗಗಳ ಸಮತೆ, ಬಡವರ ಉದ್ಧಾರ ಹಾಗೂ ಕೆಳದರ್ಜೆಯ ಜನರ ಬೇಡಿಕೆಗಳಿಗೆ ಅದರ ಮಾನ್ಯತೆ ಸಿಕ್ಕಿದೆ.

ಪಾಶ್ಚಿಮಾತ್ಯರು ಪೂರ್ವದೇಶದಲ್ಲಿ ಎಲ್ಲಿಯೇ ಹೋದರೂ ತಮ್ಮ ಜನಾಂಗದ ಉಚ್ಚದರ್ಜೆಯ ಬಗ್ಗೆ ಜಂಭ ಕೊಚ್ಚಿಕೊಳ್ಳುವದನ್ನು ಬಿಟ್ಟಿಲ್ಲ. ಅವರು ತಮ್ಮದೇ ಆದ ಹಕ್ಕುಬಾಧ್ಯತೆಗಳನ್ನೂ ವಿಶೇಷವಾದ ಆರ್ಥಿಕ ಸಹಾಯವನ್ನೂ ಪಡೆಯಲಿಕ್ಕೆ ಹಟಹಿಡಿಯುತ್ತಾರೆ.

ಬ್ರಿಟಿಶರು ಹಾಂಕಾಂಗಕ್ಕೆ ಅಂಟಿಕೊಳ್ಳುತ್ತಾರೆ. (ರಶಿಯನ್ನರು ಇರಾಣ ಬಿಡುವದಿಲ್ಲ ಏಕೆ?) ಇಂಡೋ-ಚೀನದಲ್ಲಿ ಫ್ರೆಂಚರಿಗೆ ಅಡೆತಡೆಗಳಾಗಹತ್ತಿವೆ. ಇಂಡೋನೇಶಿಯನ್ನರು ಡಚ್ಚರ ವಿರುದ್ಧ ಬಂಡೆದ್ದಿದ್ದಾರೆ. ಬ್ರಿಟಿಶರ ಅಧೀನದಲ್ಲಿರುವ ಬರ್ಮಾಕ್ಕೆ ಶಾಂತತೆಯಿಲ್ಲ. ಹಿಂದುಸ್ಥಾನದಿಂದ ಬ್ರಿಟಿಶರು ಕಾಲ್ತೆಗೆಯುತ್ತಿದ್ದಾರೆ. ಹೀಗಿದ್ದರೂ ಈ ರಾಷ್ಟ್ರಗಳು ಪ್ರಜಾತಂತ್ರ ಬಣವನ್ನು ಸೇರುವದೆಂಬುದನ್ನು ನಿಶ್ಚಯವಾಗಿ ಹೇಳಬಲ್ಲೆವೋ? ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ಅಂಗ್ಲೋ—ಅಮೇರಿಕನ್ನರು ಅಲ್ಲಿಯ ಸರಕಾರಗಳಿಂದ ಸಹಾಯ ಪಡೆಯಲೆತ್ನಿಸಿದರೆ ರಶಿಯನ್ನರು ಅಲ್ಲಿಯ ಜನರಿಂದ ಸಹಾಯ ಪಡೆಯುತ್ತಿದ್ದಾರೆ. ಇಂಥ ಪರಿಸ್ಥಿತಿಯಲ್ಲಿ ಅಲ್ಲಿ ಆಳುವ ಅಧಿಕಾರಿಗಳು ಪಶ್ಚಿಮ ಬಣಕ್ಕೆ ಸಹಾಯವನ್ನು ಸಾರಿದರೂ ಅವುಗಳಿಂದ ಏನೂ ಸಿಗಲಾರದು. ಯಾಕಂದರೆ ಅವುಗಳ ಪ್ರಜೆಗಳೆಲ್ಲರೂ ವಿರುದ್ಧ ದಿಸೆಯಲ್ಲಿ ನುಗ್ಗುತ್ತಲಿದ್ದಾರೆ. ಕಾರಣ ಅಮೇರಿಕೆಯು ತನ್ನ ಪರರಾಷ್ಟ್ರ ಧೋರಣೆಯಲ್ಲಿ ರಶಿಯದ ವಿರುದ್ಧ ಬಣ ಕಟ್ಟುವದನ್ನು ಬಿಟ್ಟುಬಿಡುವದು ಲೇಸು.

## ಮಹತ್ವದ ಪ್ರಶ್ನೆ

ಈ ಎಲ್ಲ ಮುದ್ದೆಗಳನ್ನು ಅತಿ ಸೂಕ್ಷ್ಮವಾಗಿ ಪರಿಶೀಲಿಸಿದರೆ ಬೇರೆ ಆತಂಕಗಳು ತಲೆದೋರುವದರಿಂದ ಅದು ಮತ್ತಷ್ಟು ಭೀಕರವಾದದ್ದಾಗುವದು. ರಶಿಯನ್ನರ ವಿರುದ್ಧ ಜಾಗತಿಕ ಸಂಘವನ್ನು ನಿರ್ಮಿಸಲು ಶಕ್ಯವಾಯಿತೆಂದು ತಿಳಿದರೂ ಅಮೇರಿಕೆಯು ಅದನ್ನು ನಿರ್ವಹಿಸಲು ಸಾಧ್ಯವೇ ? ಅದರಲ್ಲಿ ಅಂಥ ಸಂಘಟನೆಯನ್ನು ನಿರ್ವಹಿಸುವ ಸಾಮರ್ಥ್ಯ ಹಾಗೂ ಒಳ್ಳೆ ಮುತ್ಸದ್ದಿತನವಿದೆ ಎಂದು ತಿಳಿಯುವಾ. ಆದರೆ ನಮ್ಮಲ್ಲಿ ಜಾಣತನವು ಇಲ್ಲವೆ ಮನಸ್ಸು ಅಥವಾ ಆ ತರದ ಉದ್ದೇಶವಾದರೂ ಇರುವದೇ ? ನಾವು ಯುದ್ಧ ಕಾಲದ ಪರಿಸ್ಥಿತಿಯನ್ನು ಎದುರಿಸಲು ಸಿದ್ಧರೋ ? ಬೆಲೆ ನಿಯಂತ್ರಣವನ್ನು ಸಹಿಸದಂಥ ಹಾಗೂ ಅತಿ ನಿಕಟ ಸಂಬಂಧಿಕನಿಗೆ ಮೂರು ಬಿಲಿಯನ್ ಡಾಲರ್ (ಅಂದರೆ ಮೂರು ದಿವಸದ ಯುದ್ಧದ ಖರ್ಚು ಮಾತ್ರ) ಕೊಡುವದರ ಸಲುವಾಗಿ ೬ ತಿಂಗಳಗಳ ವರೆಗೆ ಚರ್ಚಿಸಿದಂಥ ನಮ್ಮಂಥವರು ಉಳಿದವರಿಗೆ ಹಣಕೊಡಲು ಸಿದ್ಧರೋ? ಜಗದ್ವ್ಯಾಪಿ ಸಂಘಟನೆಯನ್ನು ಮಾಡಲು ಆರ್ಥಿಕ ಹಾಗೂ ಸಾಮಾಜಿಕ ರೀತಿಯಿಂದ ಸಹಾಯ ಸಲ್ಲಿಸಲು ಅಮೇರಿಕೆಯ ಪ್ರಜಾಸತ್ತಾತ್ಮಕ ಧೋರಣೆಯು ಒಪ್ಪುವದೇ ?

ಪರರಾಷ್ಟ್ರ ಧೋರಣೆಯಲ್ಲಿ ಮಾತ್ರ ನಾವು ಕಾರ್ಯದ ಬದಲು ಬರಿ ಮಾತುಗಳನ್ನು ಆಡುವ ಚಟವನ್ನು ಇಟ್ಟುಕೊಂಡಿದ್ದೇವೆ. ಮತ್ತು ಪರರಾಷ್ಟ್ರಗಳು ನಮ್ಮ ಬಾಯಿ ಬಡಾಯಿಗೆ ಅಷ್ಟೇ ಬೆಲೆಯನ್ನು ಕೊಟ್ಟು ನ್ಯಾಯವಾದ ಕಾರ್ಯವನ್ನು ಮಾಡುವವೆಂದು ನಂಬಿಕೊಂಡಿದ್ದೇವೆ.

ನಾವು ನಾಝಿ ಜರ್ಮನಿಯನ್ನು ಹತ್ತು ವರ್ಷಗಳ ವರೆಗೆ ಬಾಯಿಗೆ ಬಂದ ಹಾಗೆ ಹೀಯಾಳಿಸಿದೆವು. ಅವರು ನಮ್ಮ ಮಾತಿಗೆ ಬೆಲೆಗೊಡಲಿಲ್ಲ. ಈಗ ನಾವು ರಶಿಯವನ್ನು ತೆಗಳುತ್ತಲಿದ್ದೇವೆ. ಪ್ರಜಾತಂತ್ರ ಬಣದ ಅಂಜಿಕೆ ಹಾಕುತ್ತಲಿದ್ದೇವೆ ರಶಿಯವು ಇದನ್ನು ತಿಳಿದುಕೊಂಡರೆ ಒಳ್ಳೆಯದಾಯಿತು. ಇಲ್ಲದಿದ್ದರೆ ನಾವೇ ಪೇಚಿನಲ್ಲಿ ಬೀಳಬೇಕಾಗಬಹುದು.

## ನಾವು ಮಾಡಬಹುದಾದದ್ದೇನು ?

ನಾವು ಪೇಚಿನಿಂದ ಅಲಿಪ್ತರಾಗಿರಬೇಕು. ನಾವು ಪ್ರಜಾಸತ್ತಾತ್ಮಕ ಬಣವನ್ನು ಕಟ್ಟಲು ಸ್ವಲ್ಪೂ ಸಿದ್ಧರಿಲ್ಲ. ಮತ್ತು ಅಂಥ ನೀತಿಯು ಎಷ್ಟು ಪರಿಣಾಮಕಾರಿಯಾಗುವದೆಂಬುದು ಸಂಶಯಾಸ್ಪದವೇ. ಅದಕಾರಣ ಈಗ ಬೇರೆ ಯಾವ ಮಾರ್ಗಗಳಿವೆಯೆಂಬುದನ್ನು ಯೋಚಿಸುವದು ಒಳ್ಳೆಯದು.

ನಮಗೆ ಮೂರು ಮಾರ್ಗಗಳು ಒಮ್ಮೆಲೇ ಹೊಳೆಯುತ್ತವೆ. ಮೊದಲನೆಯದು ಈಗಲೇ ರಶಿಯದ ಸಂಗಡ ಯುದ್ಧ. ಯಾಕಂದರೆ ಇನ್ನೂ ಅಟಂಬಾಂಬ ಗುಟ್ಟಾಗಿಟ್ಟದ್ದೇವೆ ಹಾಗೂ ರಶಿಯವು ತನ್ನ ಸಂರಕ್ಷಣೆಯ ಕಾರ್ಯವನ್ನು ಇನ್ನೂ ಪೂರ್ಣ ಮಾಡಿಲ್ಲ. ಆದರೆ ಇದನ್ನು ಮಾನ್ಯ ಮಾಡಲಾಗದು. ಇನ್ನುಳಿದ ಎರಡು ದಾರಿಗಳನ್ನು ಅತಿ ಸೂಕ್ಷ್ಮ ರೀತಿಯಿಂದ ವಿಚಾರಿಸಬೇಕಾಗುವದು.

ಅವುಗಳಲ್ಲಿ ಮೊದಲನೆಯದು ಎಲ್ಲ ರಾಷ್ಟ್ರಗಳು ಮನ್ನಿಸುವಂಥ ಒಂದು ಸುದೀರ್ಘವಾದ ಕಾರ್ಯಪಟ್ಟಿಯನ್ನು ಸಿದ್ಧ ಪಡಿಸಿ ಎಲ್ಲ ಪ್ರಜಾಸತ್ತಾತ್ಮಕ ರಾಷ್ಟ್ರಗಳು ಹಾಗು ಅವುಗಳ ಬೆಂಬಲಿಗರು ಒಂದಾಗುವಂತೆ ಮಾಡಿ ಅವುಗಳಿಂದ ಸಹಾಯವನ್ನು ಪಡೆಯುವಂತೆ ಮಾಡಬೇಕು. ಜಗತ್ತಿನಲ್ಲಿಯ ಸತ್ಯ ಸಂಗತಿಗಳನ್ನು ನಂಬುವರಿಗೆ ಇದನ್ನು ಮಾಡಲು ಸುಲಭವಾಗುವದು. ಹೊಸ ಮಾದರಿಯ ಪರರಾಷ್ಟ್ರ ಧೋರಣೆಯನ್ನು ವಹಿಸಿದರೆ ಇದು ಸಾಧ್ಯ.

ಆ ಧೋರಣೆಯಲ್ಲಿ ನಾವು "ಕೆಳದರ್ಜೆ" ಯವರನ್ನು "ಸಮಾನತೆ"ಯಿಂದ ನಡೆಸಿಕೊಳ್ಳಬೇಕು, ಆರ್ಥಿಕ ಹಾಗೂ ಮಿಲಿಟರಿ ಸಾಮ್ರಾಜ್ಯವನ್ನು ತ್ಯಜಿಸತಕ್ಕದ್ದು. ಸ್ವರಾಷ್ಟ್ರದಲ್ಲಿಯಾದರೂ ಪ್ರಜಾಸತ್ತಾತ್ಮತೆ ಹಾಗೂ ಸಮತೆಯನ್ನು ಕಾಯತಕ್ಕದ್ದು. ನಮ್ಮ ಆರ್ಥಿಕ ಧೋರಣೆಯಿಂದ ನಾವು ಹಿಂದುಳಿದ ವರ್ಗದ ಏಳ್ಗೆಗೆ ಲಕ್ಷ ಪೂರಯಿಸಬೇಕಾಗುವದು.

ಎರಡನೆಯದೆಂದರೆ ಯಾವದೇ ಬಣಗಳ ವಿಚಾರವನ್ನು ಬಿಟ್ಟುಗೊಟ್ಟು—ರಶಿಯನ್ನರ ಕೂಡ ಸಾಗುವದು. ರಶಿಯದ ಈಗಿನ ಉದ್ಯೋಗದ ಮನೋವೃತ್ತಿಯಿಂದು ಇದು ಅಸಂಗತವೆನಿಸಬಹುದು. ಆದರೆ ಉಳಿದ ಮಾರ್ಗಗಳಿಗಿಂತ ಇದು ಯೋಗ್ಯವಾದದ್ದೂ ಸುಲಭವಾದದ್ದೂ ಇರುವದು. ನಾವು ಎಲ್ಲಿಯ ವರೆಗೆ ಆಟಂ ಬಾಂಬನ್ನು ಗುಪ್ತವಾಗಿಡುತ್ತೇವೋ ಹಾಗೂ ಅದನ್ನು ಸಿದ್ಧಪಡಿಸುತ್ತೇವೋ, ಎರಡು ಮಹಾಸಾಗರಗಳಲ್ಲಿ ನಮ್ಮ ಸಂರಕ್ಷಣೆಯ ಸೀಮೆಯನ್ನು ಬೆಳೆಯಗೊಡುವೆವೋ ಮತ್ತು ಯುದ್ಧದ ಮಾತುಗಳನ್ನು ಸಹಜವಾಗಿ ಆಡುವೆವೋ, ಅಲ್ಲಿಯ ವರೆಗೆ ರಶಿಯವು ತನಗೆ ತಿಳಿದ ರೀತಿಯಲ್ಲಿ ತನ್ನ ಸಂರಕ್ಷಣೆಯ ಸಿದ್ಧತೆಮಾಡಿಕೊಳ್ಳಬೇಕಾಗುವದು. ಬರಿ ಮಾತುಗಳು ಅದನ್ನು ತಡೆಗಟ್ಟಲಾರವು. ಮಾನಸಿಕ ಅಸ್ವಾಸ್ಥ್ಯವು ಕದಡುತ್ತವೆ. ಹಾಗೂ ವಿರೋಧಿ ಬಣಗಳನ್ನು ನಿರ್ಮಿಸುವದರಿಂದ ಅದು ಅತಿ ತೀವ್ರವಾದ ತನ್ನ ಸಿದ್ಧತೆಯನ್ನು ಮಾಡಲೇ ಬೇಕಾಗುತ್ತದೆ.

ಆದರೆ ನಮ್ಮಿಂದ ರಶಿಯಕ್ಕೆ ಯಾವ ಹೆದರಿಕೆಯಿಲ್ಲೆಂದು ಮನವರಿಕೆಮಾಡಿಗೊಟ್ಟರೆ ಅದರ ಶಕ್ತಿ ಸರ್ವಸ್ವವನ್ನು ಶಾಂತಿ ಹಾಗು ಪುನರ್ರಚನೆಯ ಸಲುವಾಗಿ ಕೇಂದ್ರೀಕರಿಸಲು ಸಾಧ್ಯವಾಗುವದು. ಪ್ರಜಾಸತ್ತೆ ಹಾಗೂ ಕಮ್ಯುನಿಸ್ಟ ತತ್ವಗಳೆರಡೂ ಹೀಗೆ ಕೂಡಿದರೆ ಅವರ ಪ್ರಚಾರಕರ ಶಕ್ತಿಯನ್ನು ದೇಶದಲ್ಲಿಯ ಬೇರೆ ಕಾರ್ಯಕ್ಕೆ ಉಪಯೋಗಿಸಬಹುದು. ಹೀಗೆ ಮಾಡಲು ನಾವು ಶಕ್ತರಾದರೆ ಸಂಯುಕ್ತ ರಾಷ್ಟ್ರ ಸಂಘಗಳಲ್ಲಿಯೂ ಸಂರಕ್ಷಣೆಯ ಸಭೆಗಳಲ್ಲಿಯೂ ನಮ್ಮ ತಕರಾರುಗಳನ್ನು ಸರಿಪಡಿಸಿಕೊಳ್ಳಲು ಸಹಾಯವಾಗುವದು. ಹಾಗೂ ಹೊಸ ಜಗತ್ತಿಗೆ ಮಾದರಿಯಾಗಿ ಉತ್ತೇಜನವಾಗುವದು. ನಾವೆಲ್ಲರೂ ಒಂದಾಗಿ ಯುದ್ಧಕಾಲದಲ್ಲಿ ಜಯವನ್ನು ಹೊಂದಿದಂತೆ ಈಗಲಾದರೂ ಶಾಂತಿಕಾಲದ ಜಯಭೇರಿಯನ್ನು ಹೊಡೆಯಲು ಸ್ಫೂರ್ತಿಬರಬಹುದು.





ಕರ್ಮವೀರ

# ಹರಿಜನ ಪುರವಣಿ



## ಗ್ರಾಮೋದ್ಯೋಗಗಳು

ಗ್ರಾಮೋದ್ಯೋಗಗಳ ಚರ್ಚೆಯಲ್ಲಿ ತೊಡಗಿರುವ ವಿಚಾರಶೀಲ ಗೆಳೆಯರೊಬ್ಬರು ಬರೆಯುತ್ತಾರೆ.

"ನಿಮ್ಮ ಅನೇಕ ವಿಚಾರಗಳು ಒಳ್ಳೆಯವಿರುವುವಲ್ಲದೆ ಯಾವ ಜನರ ಸಲುವಾಗಿ ಅವು ಹೇಳಲ್ಪಟ್ಟಿರುವವೋ ಅಂಥವರ ನೈತಿಕ ಮಟ್ಟವನ್ನು ಬೆಳೆಸುವಂಥವಿರುತ್ತವೆ. ಜನಸಾಮಾನ್ಯರು ತಮ್ಮ ಸ್ವಂತಲಾಭದ ದೃಷ್ಟಿಯಿಂದ ಸ್ವಾರ್ಥಪ್ರೇರಿತರಾಗಿ ಅದರಲ್ಲಿ ತೊಡಗುತಿರುವರೆಂಬದು ವಸ್ತುಸ್ಥಿತಿಯಾಗಿದೆ. ಸದ್ಭಾವನೆಯ ಆಧಾರದ ಮೇಲೆ ರಚಿತವಾಗುವ ಆರ್ಥಿಕ ವ್ಯವಸ್ಥೆ ಬಹಳ ದಿನಗಳ ವರೆಗೆ ಬಾಳಲಾರದು. ಇಷ್ಟೊಂದು ದಿನಗಳವರೆಗಿನಪರಿಶ್ರಮ ಮತ್ತುಪ್ರಯತ್ನದ ನಂತರವೂ ಖಾದಿಯ ಕಾರ್ಯಕ್ರಮವು ಹೇಳಿಕೊಳ್ಳುವಷ್ಟು ಯಶಸ್ಸನ್ನು ಸಂಪಾದಿಸಲಿಲ್ಲ. ಇದಕ್ಕೆ ಕಾರಣವೆಂದರೆ ನಿಮ್ಮ ಅನುಯಾಯಿಗಳು, ಇಂಗ್ಲಿಶ್ ವ್ಯಾಪಾರಸ್ಥರು, ಗಿರಣಿ ಒಡೆಯರು ಮತ್ತು ಬಟ್ಟೆ ವ್ಯಾಪಾರಿಗಳು ಮುಖ್ಯವಾಗಿ ಸ್ವಾರ್ಥಭಾವನೆಯಿಂದ ಪ್ರೇರಿತರಾಗಿ ಕೆಲಸ ಮಾಡಿದ್ದು.

"ಮನುಷ್ಯ ಮನುಷ್ಯರಲ್ಲಿ ಸರಳ ವ್ಯವಹಾರವು ನಡೆಯುವದು ಉಚಿತ. ಪ್ರಾಮಾಣಿಕತೆಯ ಉಚ್ಚ ನೈತಿಕ ತತ್ವದ ಮೇಲೆಯೆ ಸಮಾಜವು ರಚಿಸಲ್ಪಡಬೇಕೆಂದು ನನ್ನ ಮನೀಷೆ. ಆದರೆ ವ್ಯಾಪಾರಿ ಧೋರಣೆ ಇಲ್ಲವೆ ಲಾಭಬಡಕತನದ ಪ್ರವೃತ್ತಿಯನ್ನು ಸಂಪೂರ್ಣವಾಗಿ ಬಿಟ್ಟುಗೊಡುವವರೆಗೆ ಇದು ಶಕ್ಯವಿಲ್ಲೆಂದು ನನಗನಿಸುತ್ತದೆ. ಇದೀಗ ಬಗೆಬಗೆಯ ನಿಯಂತ್ರಣಗಳಿವೆ. ಆಹಾರದ ಮೇಲೆ ನಿಯಂತ್ರಣ, ವಾಹನಗಳ ಮೇಲೆ ನಿಯಂತ್ರಣ. ಈ ದಿಸೆಯಲ್ಲಿ ಮುನ್ನಡೆಯಲಿಕ್ಕೆ ಇದೀಗ ತಕ್ಕ ಸಮಯ ಪ್ರಾಪ್ತವಾಗಿದೆ.

"ಮುಂಬಯಿ ಸರಕಾರದವರು ಗ್ರಾಮೋದ್ಯೋಗಗಳಿಗಾಗಿ ಸಮಿತಿಯೊಂದನ್ನು ನಿಯಮಿಸಿರುವರು. ಶ್ರೀ ಮನು ಸುಭೇದಾರ ಶ್ರೀ ಲಕ್ಷ್ಮೀದಾಸ ಅಸಾರ ಮತ್ತು ಶ್ರೀ ಧೋತರೆಯವರು ಆ ಸಮಿತಿಯಲ್ಲಿರುವರು. ನನ್ನ ಯೋಜನೆ ಹೀಗಿದೆ.

"ಒಂದು ಹಳ್ಳಿಯನ್ನು ಅಥವಾ ಎರಡು ಮೂರು ಹಳ್ಳಿಗಳನ್ನು ಒಂದು ಘಟಕವನ್ನಾಗಿ ಹಿಡಿಯುವಾ. ಆ ಘಟಕದಲ್ಲಿಯ ಜನಸಂಖ್ಯೆಯನ್ನು ಮಕ್ಕಳು, ಹೆಣ್ಣುಮಕ್ಕಳು, ವೃದ್ಧರು ಮತ್ತು ಆರೋಗ್ಯವಂತ ಪುಷ್ಟಕಾಯದ ತರುಣರೆಂದು ವಿಭಾಗಿಸುವಾ. ನಿಯಮಿತವಾಗಿ ಕೆಲಸ ಮಾಡದಿದ್ದವರು ಅಥವಾ ಇಡೀ ವರ್ಷ ಕೆಲಸವಿಲ್ಲದವರು ಹಲವರು ಇದರಲ್ಲಿ ಇರುವರು. ಕೊನೆಯದಾಗಿ ಯಾವುದೊಂದು ಉದ್ಯೋಗವನ್ನು ಮಾಡುವ ಬುದ್ಧಿ ಶಕ್ತಿಯಿಲ್ಲದಿದ್ದವರೂ ಇರುವರು.

"ಇವರಲ್ಲಿ ಮಕ್ಕಳಿಗೆ ದಿನಾಲು ೩-೪ ಗಂಟೆಗಳ ವರೆಗೆ ದುಡಿಯುವ ಕೆಲಸ ಕೊಡಬಹುದು; ಆದರೆ ಬೇಸರಿಕೆ ಬರುವಂಥ ಕೆಲಸ ಮಾತ್ರ ಆದಾಗಿರಬಾರದು. ದಿನದಲ್ಲಿ ಉಳಿದ ಅರ್ಧ ವೇಳೆಯಲ್ಲಿ ಅವರು ಸಾಲೆಗೆ ಹೋಗಬಹುದು.

"ಮಕ್ಕಳು ಮತ್ತು ಹಿರಿಯರು ಕೆಲಸ ಮಾಡಲಿಕ್ಕೆ ಪ್ರಾರಂಭಿಸಿದಂದಿನಿಂದ ಅವರಿಗೆ ಅನುಕ್ರಮವಾಗಿ ಒಂದಾಣೆ ಮತ್ತು ನಾಲ್ಕಾಣೆ ಕೂಲಿ ಕೊಡಬಹುದು. ಅವರು ನೈಪುಣ್ಯವನ್ನು ಪಡೆಯುತ್ತ ನಡೆದಂತೆ ಒಳ್ಳೆ ಕೆಲಸ ಮಾಡುತ್ತ ಹೋದಂತೆ ಮಕ್ಕಳ ಕೂಲಿಯನ್ನು ಐದಾಣೆಗೇರಿಸಬೇಕು; ಹಿರಿಯರಿಗೆ ದಿನಾಲು ಎಂಟಾಣೆ ಕೊಡಬೇಕು.

"ಒಂದು ಹಳ್ಳಿಯಲ್ಲಿ ಅಲ್ಲಿನ ಜನರಿಗೆ ಬೇಕಾಗುವಂಥ ಒಂದೇ ಕೈಗಾರಿಕೆಯನ್ನೆ ಸಾಗಿಸಬೇಕು. ಅಂದರೆ ಅಲ್ಲಿನ ಕೆಲಸಗಾರರು ಸುಮಾರು ಎರಡು ತಿಂಗಳಗಳಲ್ಲಿ ಆ ಕೆಲಸಗಳಲ್ಲಿ ನೈಪುಣ್ಯ ಪಡೆಯುವರು. ಅವರಿಂದ ಪ್ರಮಾದಗಳಾಗುವದು ತಪ್ಪುವದು. ಸ್ಥಳಿಕ ಜನರೆ ತೆಗೆದುಕೊಳ್ಳುವಂಥ ವಸ್ತುಗಳನ್ನೆ ಅವರು, ತಯಾರ ಮಾಡಬೇಕು. ಸರಕಾರದವರು ಕಚ್ಚಾ ಮಾಲನ್ನು ಪೂರಯಿಸುವ ವ್ಯವಸ್ಥೆ ಮಾಡಬೇಕು. ಮತ್ತು ಕೆಲಸಗಾರರನ್ನು ಆಯಾ ಕೈಗಾರಿಕೆಗಳಲ್ಲಿ ತರಬೇತಿ ಮಾಡಲು ಇಬ್ಬರು ಮೂವರು ತಜ್ಞರನ್ನು ನಿಯಮಿಸಬೇಕು. ಅಲ್ಲದೆ ಅಲ್ಲಿ ತಯಾರಾದ ಸರಕುಗಳನ್ನು ಲೋಕಪ್ರಿಯ ಮಾಡುವ ಹೊಣೆಯನ್ನು ಸರಕಾರ ಹೊರಬೇಕು. ಅವುಗಳ ಸಾಗಿಗೆಯ ವ್ಯವಸ್ಥೆಯನ್ನು ಮತ್ತು ಬಡವರಿಗೆ ಅಗ್ಗದರದಿಂದ ಹಂಚುವ ವ್ಯವಸ್ಥೆಯನ್ನು ಸರಕಾರದವರು ಮಾಡಬೇಕು.

"ಈ ರೀತಿ ಸಿದ್ಧಮಾಡಲ್ಪಟ್ಟ ಅನೇಕ ವಸ್ತುಗಳ ಬೆಲೆ ದೊಡ್ಡ ಕಾರಖಾನೆಗಳಲ್ಲಿ ಸಿದ್ಧಮಾಡಲ್ಪಟ್ಟ ವಸ್ತುಗಳ ಬೆಲೆಗಿಂತ ಅನೇಕ ಸಂದರ್ಭಗಳಲ್ಲಿ ಕಡಿಮೆಯಾಗಬಹುದು. ಕೂಲಿಯಲ್ಲಿಯ ಮಿತವ್ಯಯ ಅಗ್ಗಧಾರಣೆಗೆ ಒಂದು ಕಾರಣವಾಗಬಹುದು. ಆದುದರಿಂದ ಈ ರೀತಿಯ ಉಳಿತಾಯದ ಹಣವನ್ನು ಕೆಲಸಗಾರರ ಹಿತಸಂಬಂಧದ ಕಾರ್ಯಗಳಲ್ಲಿಯೆ ವ್ಯಯಮಾಡಬೇಕು. ಸಶಕ್ತ ಮನುಷ್ಯರಲ್ಲಿ ಅನೇಕ ಜನರು ಒಕ್ಕಲತನ, ರೇಲ್ವೆ ಮತ್ತು ಉಳಿದ ಅಂಥ ಉದ್ಯೋಗಗಳಲ್ಲಿ ತೊಡಗಿದ್ದಾದರೆ ಮನೆಮಾರಿಗೆಯ ಕೈಗಾರಿಕೆಗಳಿಗೆ ಬಹಳ ಸ್ವಲ್ಪ ಜನರುಳಿದು ಉತ್ಪಾದನೆ ಕಡಿಮೆಯಾದರೂ ಅಷ್ಟೊಂದು ವಿವಂಚನೆ ಪಡುವ ಕಾರಣವಿಲ್ಲ.

ಈ ಯೋಜನೆಯಿಂದ ಕೋಟ್ಯವಧಿ ಜನರಿಗೆ ಉತ್ಪನ್ನ ಹೆಚ್ಚುವದು. ನಿರುದ್ಯೋಗಿಗಳಾಗದೆ ತಮ್ಮ ಉಪಜೀವನ ಸಾಗಿಸಿಕೊಳ್ಳುವ ಅವಕಾಶ ಅವರಿಗೆ ದೊರೆಯುವದು. ಮರ್ಯಾದೆ ಕಳೆದುಕೊಂಡು ಸೀದಾ ಮುಂತಾದ್ದಕ್ಕೆ ಶರಣು ಹೋಗುವದೂ ತಪ್ಪುವದು. ಈ ಸಾಮಾಜಿಕ ವಿಮೆಯ ಯೋಜನೆ ನಮ್ಮ ಹಿಂದೀ ಸಂಸ್ಕೃತಿಗನುಗುಣವಾಗಿರುವದು. ಮತ್ತು ನನ್ನ ಮೂವತ್ತೈದು ವರುಷಗಳ ಸ್ವಂತ ಅನುಭವದಿಂದ ಇದನ್ನು ಸಿದ್ಧ ಪಡಿಸಿದ್ದಾಗಿದೆ. ಯಾವದೇ ಬಗೆಯ ವಿಶೇಷ ನೈಪುಣ್ಯ ಪಡೆಯದೆ ಇದ್ದ ಮತ್ತು ತಮ್ಮ ಉಪಜೀವನಕ್ಕಾಗಿ ಮೊದಲು ಹೆಚ್ಚಿಗೆ ತರಬೇತಿ ಹೊಂದದಿದ್ದ ಸ್ತ್ರೀ—ಪುರುಷರೂ ಇದರ ಲಾಭ ಪಡೆಯಬಲ್ಲರು. ಹೆಚ್ಚು ಹಣಗಳಿಸಬೇಕೆನ್ನುವರಿಗೆ ಹೆಚ್ಚು ಲಾಭಕರವಾದ ಉದ್ಯೋಗಗಳು ದೊರೆತರೆ ಅವರು ಅವಶ್ಯವಾಗಿ ಅವುಗಳನ್ನು ಕೈಕೊಳ್ಳಬಹುದು. ಆದರೆ ಯಾರೂ ಕೈಕಾಲು ಕಳೆದುಕೊಂಡು ನಿರುದ್ಯೋಗಿಗಳಾಗಿ ಕೂಡ್ರಬಾರದು.

"ಈ ರೀತಿಯಾಗಿ ಮಕ್ಕಳಿಗೆ ಕೈಗಾರಿಕೆಗಳನ್ನು ಕಲಿಸುತ್ತ ಇರುವಾಗಲೆ ಅವರ ಶಿಕ್ಷಣವನ್ನೂ ಸಾಗಿಸಬಹುದಾಗಿದೆ. ಅದರ ವೆಚ್ಚವನ್ನು ಈ ಯೋಜನೆಯಲ್ಲಿ ಹಾಕಬಹುದು.

ಈ ಯೋಜನೆಯ ಕೆಲ ಅಂಶಗಳು ಇಂತಿವೆ.

"ದೇಶದಲ್ಲಿರುವ ಅನೇಕ ಅನಭಿಜ್ಞ ಕೆಲಸಗಾರರನ್ನು ಕುಶಲಕಲಾಗಾರರನ್ನಾಗಿ ಮಾರ್ಪಡಿಸಬಹುದಾಗಿದೆ.

"ಸಾರಿಗೆ, ಸಂಗ್ರಹ, ಲೆಕ್ಕಪತ್ರ ಮೊದಲಾದವುಗಳು ಸರಕಾರದ ಪರವಾಗಿಯೆ ನಡೆಯತಕ್ಕದ್ದು. ಇದರಿಂದ ಜನಸಾಮಾನ್ಯರ ಜೀವನದ ವಿಶಾಲ ಕ್ಷೇತ್ರದಲ್ಲಿ ವ್ಯಾಪಾರಿ ಧೋರಣ ಸಂಪೂರ್ಣವಾಗಿ ಇಲ್ಲದಂತಾಗುವದು. ಲಾಭಬಡಕ ವ್ಯಾಪಾರಿಗಳು ಬಡವರ ಜೀವನ ವ್ಯವಹಾರದಲ್ಲಿ ಕೈಹಾಕದಂತಾಗುವದು. ಈ ಯೋಜನೆಯನ್ವಯ ಕೈಗಾರಿಕೆಗಳಲ್ಲಿ ತೊಡಗಿದ ೧—೨ ಕೋಟಿ ಸ್ತ್ರೀ—ಪುರುಷರು ಮತ್ತು ಮಕ್ಕಳು ಪ್ರತಿದಿನ ೨೫—೩೦ ಲಕ್ಷ ರೂಪಾಯಿಗಳನ್ನು ಗಳಿಸಬಹುದು. ಇದರಿಂದ ಲಕ್ಷಾವಧಿ ಜನರು ಹೊಸ ಜೀವನವನ್ನು ಪಡೆದಂತಾಗುವದು. ಅವರಲ್ಲಿ ನವಶಕ್ತಿ ಉಂಟಾಗುವದು.

"ಈಗ ನಿರರ್ಥಕವಾಗುತಿರುವ ಅನೇಕಜನರ ಪರಿಶ್ರಮವನ್ನೆಲ್ಲ ಈ ಕೈಗಾರಿಕೆಯಲ್ಲಿ ಹಾಕಿಪ್ರತಿ ವರ್ಷ ೧—೨ ಕೋಟಿ ರೂಪಾಯಿಗಳನ್ನು ಸಂಪಾಸಿಬಹುದಾಗಿದೆ. ಅಷ್ಟು ಸರಕುಗಳನ್ನು ಉತ್ಪಾದಿಸಬಹುದಾಗಿದೆ.

ನೇರವಾಗಿ ಉತ್ಪಾದಕರಿಂದ ಕಚ್ಚಾ ಸರಕುಗಳನ್ನು ಸರಕಾರದವರು ಬಹಳ ಅಗ್ಗ ದರಗಳಿಂದ ಕೊಡೆಯಬಲ್ಲರು. ಅವರು ಕೊಳ್ಳುವ ಸರಕುಗಳನ್ನೆಲ್ಲ ಮೂಲ ಬೆಲೆಗೆ ಕೊಳ್ಳತಕ್ಕದ್ದು.

ವಿಶಿಷ್ಟವಾಗಿ ತರಬೇತಿ ಹೊಂದಿದವರ ಸಲಹೆಯನ್ನು ಪಡೆಯಬೇಕಾದ ಸಂದರ್ಭವೊದಗಿದರೆ ಇಂತಿಷ್ಟು ಅವಧಿಯವರೆಗೆಂದು ಅವರನ್ನು ನೇಮಿಸಿಕೊಳ್ಳಬಹುದು. ಮತ್ತು ಆ ಅವಧಿಗಾಗಿ ಅವರಿಗೆ ಗೌರವ ವೇತನವನ್ನು ಕೊಡಬಹುದು.

"ಸ್ಟೋರುಗಳ ವ್ಯವಸ್ಥೆಗಾಗಿ ಮತ್ತು ಲೆಕ್ಕಪತ್ರವನ್ನಿಡುವದಕ್ಕಾಗಿ ನೇಮಿಸಲ್ಪಟ್ಟ ಮನುಷ್ಯನೇ ಮಕ್ಕಳ ಶಿಕ್ಷಣದ ಹೊಣೆಯನ್ನು ಹೊತ್ತುಕೊಳ್ಳುವಂತಾಗಬೇಕು. ಎರಡು ಮೂರು ವರ್ಷಗಳ ನಂತರ ಸಾಲೆಗಳಲ್ಲಿಯ ಹಿರಿಯ ವಿದ್ಯಾರ್ಥಿಗಳೆ ಕಿರಿಯ ವಿದ್ಯಾರ್ಥಿಗಳ ಶಿಕ್ಷಣ ಕೊಡುವಂತಹ ಪದ್ಧತಿಯನ್ನು ಅವಲಂಬಿಸಬೇಕು. ಶಿಕ್ಷಕರು ಹಿರಿಯ ವಿದ್ಯಾರ್ಥಿಗಳಿಗೆ ಮಾತ್ರ ಕಲಿಸಬೇಕು.

"ಈ ಶಿಕ್ಷಕನು ಸರ್ವಸಾಮಾನ್ಯವಾಗಿ ಉಪಯುಕ್ತವಿರುವ ಸುಮಾರು ೫೦ ಔಷಧಗಳನ್ನು ಇಟ್ಟುಕೊಳ್ಳಬೇಕು. ಉದಾಹರಣಾರ್ಥವಾಗಿ ಟಿಂಚರ ಆಯಡಿನ್‌ದಂಥ ಪಾಶ್ಚಾತ್ಯ ಔಷಧವನ್ನು ಅಂಬಿಹಳದಿಯಂಥ ಆಯುರ್ವೇದ ಔಷಧವನ್ನು ಇಟ್ಟುಕೊಳ್ಳತಕ್ಕದ್ದು. ಸರಕಾರದವರು ಪ್ರತಿಯೊಂದು ಹಳ್ಳಿಗೆ ಈ ಔಷಧಗಳನ್ನು ಅದರ ಉಪಯೋಗದ ಬಗ್ಗೆ ಇರುವ ಸಾಹಿತ್ಯದೊಡನೆ ಪೂರೈಸಬೇಕು. ಈ ರೀತಿಯಾಗಿ ಜನರ ನಿತ್ಯೋಪಯೋಗಿಯಾದ ಕೆಳಗಿನ ವಸ್ತುಗಳನ್ನು ಸಿದ್ಧಮಾಡಬಹುದು.

| | |
|---|---|
| ಬಟ್ಟೆ | ಕಡ್ಡಿಗಳು |
| ಕಾಗದ | ರಟ್ಟು ಮತ್ತು |
| ಶೀಸುಕಡ್ಡಿ ಟಾಕಿನ- | ತಗಡಿನ |
| ತುದಿ | ಪಾಲಿಡಬ್ಬಿ |
| ಪಿನ್ನುಗಳು | ಗಳು |
| ಸೂಜಿ ತಂತಿ | ಲಿಫೊ |
| ಸಾಮಾನುಗಳು | |
| ಸಾಬೂನ | ಮುದ್ರಣ |
| ಮಣ್ಣಿನ ಸಾಮಾನ | ಮಸಾಲಿ ಸಾಮಾನ |
| ಗಡಿಗೆ | ಹಪ್ಪಳ ವಡಿ |
| ಗುಡಿಗಳು | ಮುಂತಾದವುಗಳು |
| ಕಾಜಿನ ಸಾಮಾನು | ಮಂಚ, ಪಲ್ಲಂಗ |
| ಬಳೆಗಳು | |
| ರಜಿಸ್ಟರಗಳು | ಹಣಿಗೆ |
| ಪುಸ್ತಕ ಬಾಯಿಂ- | ಬ್ರಶ್ |
| ಡಿಂಗ | ಕಸಬರಿಗೆ |
| ಒಕ್ಕಲತನದ | ಚಾಕು, ಚೂರಿ |
| ಉಪಕರಣಗಳು | |
| ಜೆಲ್ಲಿ | ಕತ್ತರಿ |
| ಮೊಳೆಗಳು | ಚರ್ಮದ |
| | ವಸ್ತುಗಳು |
| ಹೆರಾಯಿಲ್ | ಮಸಿ |
| ಬೂಟಪಾಲಿಶ್ | |
| ಮೆಟಲ್‌ಪಾಲಿಶ್ | ಗುಳ್ಳಿ |
| ಫಿನಾಯಿಲ್ | ಅರಗು |
| ಟೊಪ್ಪಿಗೆಗಳು | ವಾದ್ಯಗಳು |
| ಚಪ್ಪಲಿ | |
| ಥಾಲಿ, ತಂಬಿಗೆ | ಫೌಂಟನ್ |
| ಮುಂತಾದವುಗಳು | ಪೆನ್ನುಗಳು |
| ಥಾಲ, ಸ್ಟ್ರಾವು | ಬಾಯಿಸಿಕಲ್ಲಿನ |
| ಹಗ್ಗ ಮುಂತಾದವುಗಳು | ಉಪಕರಣ |
| ಆಟಿಗೆಯಸಾಮಾನುಗಳು | ಗಡಿಯಾಳ |
| | ಮೊದಲಾದವುಗಳ |
| ಸಣ್ಣ ಸಣ್ಣ ಕಟ್ಟಿಗೆ | ಉಪಕರಣಗಳು |
| ಯ ವಸ್ತುಗಳು | ಸ್ಟಾಕಿಂಗ |
| ಮಣಿ, ಚೌಕಿ | ಬನಿಯನ್ |
| ಮುಂತಾದವುಗಳು | ಗಂಜೀಫರಾಕು |
| | ಮುಂತಾದವು |
| | ಮೇಣಬತ್ತಿ, ಕನ್ನಡಿ |
| | ಆಟದಸಾಮಾನುಗಳು |

ಮೇಲಿನ ಪತ್ರವು ಒಳ್ಳೆ ಮೋಹಕ ಚಿತ್ರವನ್ನು ಚಿತ್ರಿಸುತಿದ್ದು ಅತ್ಯಂತ ದಕ್ಷತೆಯಿಂದ ವಿಚಾರಮಾಡಲರ್ಹವಾಗಿದೆ. ಒಂದು ಮಾತು ಮಾತ್ರ ಸ್ಪಷ್ಟವಿದೆ. ಈ ಲೇಖಕರು ಬಟ್ಟೆಗೇ ಮೊದಲನೇ ಸ್ಥಾನವನ್ನು ಕೊಟ್ಟಿರುವರು. ಸಾರ್ವತ್ರಿಕ ಉಪಯೋಗಕ್ಕೆ ಬರುವಂಥ ವಸ್ತುವೆಂದರೆ ಈ ಯಾದಿಯಲ್ಲಿ ಅದೊಂದೇ ಇರುವದು. ಖಾದಿ ಉತ್ಪಾದನೆಯ ಬೇರೆ ಬೇರೆ ವಿಧಾನಗಳಲ್ಲಿ ಲಕ್ಷಗಟ್ಲೆ ಹಿರಿಯರು ಮತ್ತು ಮಕ್ಕಳು ತೊಡಗಬಲ್ಲರು. ಅವರಿಗೆ ಸಾಕಷ್ಟು ಹಣವೂ ಸಿಕ್ಕುವದು. ಇದರಲ್ಲಿ ನೇಕಾರರೂ ಸಮಾವಿಷ್ಟರಾಗುತ್ತಾರೆ. ಇಂದು ನೇಕಾರರು ನಗರಗಳಲ್ಲಿರುತ್ತಾರೆ. ದಲ್ಲಾಳಿಗಳು ಅವರನ್ನು ಸುಲಿಯುತ್ತಾನೆ. ಜನತಾ ಸರಕಾರವು ಅವರಿಗೆ ಬೇಕಾಗುವಷ್ಟು ನೂಲನ್ನು ಪೂರಯಿಸಿದ್ದಾದರೆ ಅವರ ಕಾರ್ಯ ಸುಲಭವಾಗುವದು. ಹೆಚ್ಚು ಭದ್ರವಾದ ತಳಹದಿಯ ಮೇಲೆ ಅವರು ತಮ್ಮ ಹೋರೆಯನ್ನು ಸಾಗಿಸಬಲ್ಲರು. ಅನಂತರ ನಗರಗಳಲ್ಲಿರುವ ಅಗತ್ಯ ಅವರಿಗೆನಿಸಲಾರದು. ಆದರೆ ಇದೇನು ಪ್ರಸ್ತುತ ವಿಷಯವಲ್ಲ.

ಇದರಲ್ಲಿ ಇಬ್ಬಗೆಯ ಅಡಚಣಿಗಳು ನನಗೆ ತೋರುತ್ತವೆ. ಕೈಯಿಂದ ಮಾಡಿದ ವಸ್ತುಗಳನ್ನು ಗಿರಣಿಗಳಲ್ಲಿ ತಯಾರ ಮಾಡಿದ ವಸ್ತುಗಳಿಗಿಂತ ಅಗ್ಗವಾಗಿ ಮಾರುವದು ಶಕ್ಯವಿದೆಯೋ ಎಂಬದು ಮೊದಲನೆಯ ಅಡಚಣಿ. ಎರಡನೆಯದಾಗಿ ಮೇಲೆ ಉಲ್ಲೇಖಿಸಿದ ವಸ್ತುಗಳಲ್ಲಿ ಖಾದಿಯೊಂದನ್ನು ಬಿಟ್ಟರೆ ಉಳಿದ ಯಾವ ವಸ್ತುಗಳೂ ಸಾರ್ವತ್ರಿಕವಾಗಿ ಉಪಯೋಗಿಸಲ್ಪಡುವಂಥ ವಸ್ತುಗಳಾಗಿರುವದಿಲ್ಲ. ಅವು ಆಯಾ ಸ್ಥಳಗಳಲ್ಲಿ ಹೆಚ್ಚು ಪ್ರಮಾಣದಲ್ಲಿ ಸುರಿಸಲ್ಪಡಲಾರವು. ಆದುದರಿಂದ ನಗರಗಳಲ್ಲಿ ಅವನ್ನು ಮಾರಬೇಕಾಗುವದು. ಹೀಗಾಗಲೂ ಬೇಕಾಗಿದೆ. ಹಳ್ಳಿಯ ಹೊರಗೆ ಕೂಡ ಕೂಡಲೆ ಮಾರಾಟವಾಗುವಂಥ ವಸ್ತುಗಳನ್ನು ಸಿದ್ಧಪಡಿಸುವಷ್ಟು ನೈಪುಣ್ಯವನ್ನು ಹಳ್ಳಿಗರು ಪಡೆಯಲಿಕ್ಕೆ ಬೇಕು. ನಮ್ಮ ಹಳ್ಳಿಗಳು ಸಾಕಷ್ಟು ಅಭಿವೃದ್ಧಿ ಹೊಂದಿದರೆ ಹೆಚ್ಚು ನಿಪುಣ ಮತ್ತು ಕಲಾಕುಶಲ ಬುದ್ಧಿಯುಳ್ಳ ಜನರ ಕೊರತೆಯೇನು ಅಲ್ಲಿ ಉಂಟಾಗಲಾರದು. ಹಳ್ಳಿಗಳಲ್ಲಿ ಕವಿಗಳು ಹುಟ್ಟುವರು. ಕಲಾಕುಶಲರು, ಶಿಲ್ಪಿಗಳು, ಭಾಷಾಭಿಜ್ಞರು ಮತ್ತು ಸಂಶೋಧನ ಕುಶಲರು ಎಲ್ಲರೂ ಹಳ್ಳಿಗಳಲ್ಲಿಯೆ ಸಿಕ್ಕಬಹುದು. ಒಟ್ಟಾರೆ ಹೇಳಬೇಕಾದರೆ ಜೀವನಕ್ಕೆ ಬೇಕಾಗುವಂಥದೆಲ್ಲ ಹಳ್ಳಿಗಳಲ್ಲಿ ಸಿಕ್ಕುವಂತಾಗುವದು. ಇಂದು ನಮ್ಮ ಹಳ್ಳಿಗಳೆಂದರೆ ಕಸದ ಗುಂಪಿಗಳಂತಿವೆ. ನಾಳೆ ದಿನ ಅವು ರಮ್ಯವಾದ ಉದ್ಯಾನಗಳಂತೆ ಕಂಗೊಳಿಸಬಲ್ಲವು. ಒಳ್ಳೆ ಬುದ್ಧಿವಂತ ಜನರು ಅಲ್ಲಿ ವಾಸ ಮಾಡಬಹುದು. ಯಾರೂ ಅವರನ್ನು ವಂಚಿಸಲಾರರು, ಸುಲಿಯಲಾರರು.

ಈ ಮಾರ್ಗದಿಂದ ಹಳ್ಳಿಗಳ ಪುನರುಜ್ಜೀವನಕಾರ್ಯ ಈಗಿನಿಂದಲೆ ಪ್ರಾರಂಭವಾಗತಕ್ಕದ್ದು.

-೯ನೇ ಪುಟಕ್ಕೆ

# ನಾರದ ಪತ್ರ

## ಒಂದು ಸಮಸ್ಯೆ

ಗಾಂಧೀಜಿ ನೌಖಾಲಿಗೆ ಹೊರಡಲು ಇನ್ನೂ ನಾಲ್ಕು ದಿನ ತಡವಾಯಿತು. ನೌಖಾಲಿಯಲ್ಲಿ ನಡೆದ ಘಟನೆಗಳ ಕರುಣ ಕಥೆಗಳು ತುಸು ತುಸು ಹರಿದು ಬಂದ ಹಾಗೆ ತ್ವೇಷ ಹೆಚ್ಚುತ್ತಲೆ ಇತ್ತು. ಬಕ್ರೀದ ಹಬ್ಬ ಹತ್ತಿರ ಬಂದಿತ್ತು. ಈದ ಸುರಕ್ಷಿತವಾಗಿ ಮುಗಿಯುವ ವರೆಗಾದರೂ ಗಾಂಧೀಜಿ ಕಲಕತ್ತೆಯಲ್ಲಿಯೆ ಉಳಿದುಕೊಳ್ಳಬೇಕೆಂಬುದು ಬಂಗಾಲ ಮುಖ್ಯ ಮಂತ್ರಿಗಳ ಮತ್ತು ಅವರ ಸಂಗಡಿಗರ ಅಪೇಕ್ಷೆಯಾಗಿತ್ತು. ಗಾಂಧೀಜಿ ಇದಕ್ಕೆ ಒಪ್ಪಿದರು. ಇಡಿ ಹಿಂದುಸ್ಥಾನವೆ ದೊಡ್ಡ ಪೇಚಿನಲ್ಲಿ ಬಿದ್ದಿದೆ; ಬಂಗಾಲದ ಸ್ಥಿತಿಯಂತೂ ಇನ್ನಷ್ಟು ಕಠಿಣವಾಗಿದೆಯೆಂದು ಗಾಂಧೀಜಿ ಕಳೆದ ಶುಕ್ರವಾರದಿನ ಪ್ರಾರ್ಥನಾನಂತರದ ಭಾಷಣದಲ್ಲಿ ನುಡಿದರು. ಇಂಥ ಇಕ್ಕಟ್ಟಿನಲ್ಲಿ ನಮ್ಮ ಗಳ ಕರ್ತವ್ಯವೇನೆಂದು ಕೇಳಲಾಗುತ್ತಿದೆ. ಧರ್ಮಶಾಸ್ತ್ರಗಳಲ್ಲಿ ಉಕ್ತವಾದ, ಜ್ಞಾನಿಗಳು ಅನುಸರಿಸಿದ, ವಿದ್ವಾಂಸರು ಅರ್ಥ ನಿರ್ಣಯ ಮಾಡಿದ ಹಾಗೆ. ಹೃದಯಸ್ಪರ್ಶಿಯಾದ ಮಾರ್ಗವೇ ಧರ್ಮವೆಂಬು ಶಾಸ್ತ್ರವಾಕ್ಯ. ಮೊದಲು ಮೂರು ನಿಯಮಗಳು ಪೂರೈಸಲ್ಪಟ್ಟ ಮೇಲಿಯೆ ನಾಲ್ಕನೆಯದನ್ನು ಅನ್ವಯಿಸತಕ್ಕದ್ದು. ಅಂತೆಯೇ ಪಾಮರನಾದ ಅಥವಾ ದುಷ್ಟನಾದ ಮನುಷ್ಯನ ಉಕ್ತಿಗಳು ಹೃದಯಸ್ಪರ್ಶಿಯಾಗಿದ್ದರೂ ಅವನ್ನು ಪಾಲಿಸುವ ಅಧಿಕಾರ ನಮಗಿಲ್ಲ. ಧರ್ಮನಿರ್ಣಯಮಾಡುವ ಅಧಿಕಾರ ಒಬ್ಬನಿಗೆ ಬರಬೇಕಾದರೆ ಅತನು ನಿರುಪದ್ರವ, ಅದ್ವೇಷ, ಸರ್ವಪರಿತ್ಯಾಗ ಈ ಮೂರು ನಿಯಮಗಳನ್ನು ನಿಷ್ಠಾಪೂರ್ವಕವಾಗಿ ಪರಿಪಾಲಿಸುವವನಿರಬೇಕು.

ತಮ್ಮ ಕರ್ತವ್ಯವೆಂದು ತಾವು ಭಾವಿಸಿರುವುದನ್ನು ಜನರಿಗೆ ಹೇಳಿದ್ದೇವೆಂದು ಗಾಂಧೀಜಿ ಉಸುರಿದರು. ಆದರೆ ಅವರವರ ಕರ್ತವ್ಯವೇನೆಂದು ಅವರವರೇ ಪರಿಭಾವಿಸಿ ತೀರ್ಮಾನಿಸಿಕೊಳ್ಳುವದು ಅವಶ್ಯ. ತಮ್ಮನ್ನೇ ಜನರು ಅನುಸರಿಸಬೇಕೆಂದು ಅವರ ಆಶಯವಾಗಿರಲಿಲ್ಲ. ಆದರೆ ಈ ಇಕ್ಕಟ್ಟಿನ ಪ್ರಸಂಗದಲ್ಲಿ ತಮ್ಮ ತಮ್ಮ ಕರ್ತವ್ಯವೇನೆಂದು ಕಂಡು ಹಿಡಿಯುವ ಹಾದಿಯನ್ನಷ್ಟೆ ಅವರು ತೋರಿಸಿದ್ದರು. ಪರಮಾತ್ಮನ ಮೇಲೆ ಭಾರ ಹಾಕಿದರೆ ಕರ್ತವ್ಯಮಾರ್ಗ ತಾನಾಗಿ ಹೊಳೆಯುವದೆಂದು ಭಗವದ್ಗೀತೆ ಅಪ್ಪಣೆ ಕೊಡಿಸಿದೆ.

## ಸುಯೋಗ

ಶಾಂತಿ ಪ್ರಯತ್ನಗಳಿಗೆ ಸಾಧಕವಾಗುವಂತೆ ಪಡುಗಾಲ ಸರಕಾರದ ನಾಲ್ಕು ಮಂತ್ರಿಗಳ ಕಲಕತ್ತೆಗೆ ಬಂದುದು ಒಳ್ಳೇ ಸುಯೋಗವೇ ಆಯಿತು. ಅದರಿಂದ ಸತ್ಪರಿಣಾಮವಾಗಿ, ಬಾಗಿಲಿಗೆ ಬಂದು ನಿಂತಿದ್ದ ಬಿಕ್ಕಟ್ಟೊಂದನ್ನು, ತಾತ್ಕಾಲಿಕವಾಗಿಯಾದರೂ ಪರಿಹರಿಸಿದಂತಾಯಿತು. ಅವರ ಬರವಿಗೂ ವಾಯಿಸರಾಯರ ಆಗಮನಕ್ಕೂ ತಾಳಗೂಡಿದ್ದರಿಂದ ಎಷ್ಟೋ ಬಗೆಯ ಊಹಾಪೋಹಗಳಿಗೆ ಎಡೆಯಾಯಿತು. ವಾಯಿಸರಾಯರು ಕೈಹಾಕಬೇಕೆಂದು ಅವರು ಒತ್ತಾಯಗೊಳಿಸಬಹುದೆ? ಅಥವಾ ಹೆಚ್ಚು ಪರಿಣಾಮಕರವಾದ ಉಪಾಯಗಳನ್ನು ಕೈಕೊಳ್ಳುವಂತೆ ಬಂಗಾಲ ಮಂತ್ರಿಮಂಡಲವನ್ನು ಒತ್ತಾಯಪಡಿಸಲು ಬಂಗಾಲ ಗವರ್ನರರನ್ನು ಕೇಳಿಕೊಳ್ಳುವರೆ? ಪ್ರಾರ್ಥನಾನಂತರದ ಭಾಷಣಗಳಲ್ಲಿ, ಪ್ರತೀಕಾರದ ಆತುರವಾಗಲಿ ರಕ್ಷಣೆಗಾಗಿ ವಾಯಿಸರಾಯ ಇಲ್ಲವೆ ಗವರ್ನರ, ಮಿಲಿಟರಿ ಅಥವಾ ಪೋಲೀಸ ಇವರ ಮುಖನೋಡುವದಾಗಲಿ ನಾವು ಯಾವುದಕ್ಕಾಗಿ ಪಣ ತೊಟ್ಟಿರುವೆವೊ ಆ ಸ್ವಾತಂತ್ರ್ಯಕ್ಕೆ ಹೊಂದಿಕೆಯಾಗುವ ಮಾತುಗಳಲ್ಲವೆಂದು ಗಾಂಧೀಜಿ ಮೇಲಿಂದ ಮೇಲೆ ಜನರಿಗೆ ಬೋಧಿಸಿದರು. ವಾಯಿಸರಾಯರ ಅಧಿಕಾರಗಳು ಕೇಂದ್ರ ಮಂತ್ರಿಮಂಡಲದಲ್ಲಿಯೂ ಗವರ್ನರರವು ಬಂಗಾಲ ಮಂತ್ರಿಗಳಲ್ಲಿಯೂ ಅವಾಹಿತವಾಗಿವೆ. ನಮಗೆ ಸ್ಥಿರವಾದ ಶಾಂತಿ ಬೇಕಿದ್ದರೆ ಅದು ಜನರ ಹೃದಯದಿಂದಲೇ ಹೊರಹೊಮ್ಮಬೇಕು. "ನಮ್ಮ ಹೃದಯ ಶಕ್ತಿಯ ಹೊರತು ಬೇರಾವುದೂ ನಮ್ಮನ್ನು ಕಾಪಾಡಲಾರದೆಂದು ನಾನು ಒದರುತ್ತ ಬಂದಿದ್ದೇನೆ. ಧೀರರನ್ನು ಅವಮಾನಗೊಳಿಸಬಲ್ಲವನಾರು? ಪ್ರತಿಹಿಂಸೆಯಿಂಬುದು ಮಾಟದ ಚಕ್ರ. ಅದರಿಂದ ಹೊರಗೆ ಪಾರಾಗುವುದೇ ಸಾಧ್ಯವಿಲ್ಲ. ನಿಮಗೆ ಪ್ರತಿಹಿಂಸೆ ಬೇಕಾಗಿದ್ದರೆ ಸ್ವಾತಂತ್ರ್ಯ ದೊರೆಯಲಾರದು. ಯಾರಾದರೊಬ್ಬ ನನ್ನನ್ನು ಕೊಂದುದಾಕಿದನೆನ್ನಿರಿ. ಅದರ ಸೇಡು ತೀರಿಸಿಕೊಳ್ಳಲು ಬೇರಾರೋ ಒಬ್ಬನನ್ನು ನೀವು ಕೊಂದು ಕೆಡವಿದರೆ ಏನು ಲಾಭ? ಹಾಗೆ ಕೇಳಿದರೆ ಗಾಂಧಿಯಲ್ಲದೆ ಗಾಂಧಿಯನ್ನು ಕೊಲ್ಲಬಲ್ಲವರಾರು? ಯಾರೂ ಆತ್ಮವನ್ನು ಕೊಲ್ಲಲಾರರು. ಅದುದರಿಂದ ಸೇಡಿನ ಭಾವನೆಯನ್ನು ನಮ್ಮ ಹೃದಯಗಳಿಂದ ಹೊರತಳ್ಳಿಬಿಡೋಣ. ಇಷ್ಟನ್ನು ನಾವು ನಿಚ್ಚಳವಾಗಿ ಕಂಡುಕೊಂಡೆವೆಂದರೆ ಸ್ವಾತಂತ್ರ್ಯಪಥದಲ್ಲಿ ದೊಡ್ಡ ಮುನ್ನಡೆಯಾದಂತೆಯೆ ಸರಿ."

## ವಿವೇಕವಿರಲಿ

ಗಾಂಧೀಜಿಯ ಎಚ್ಚರಿಕೆ ಅಕಾಲಿಕವಾಗಿದ್ದಿಲ್ಲ. ಬಿಹಾರದಲ್ಲಿ ಬಿರುಗಾಳಿಯ ಚಿಹ್ನೆಗಳು ಆಗಲೆ ತಲೆದೋರಿದ್ದವು. ಪ್ರತೀಕಾರದ ಕೂಗು ಕೇಳತೊಡಗಿತ್ತು. ಈ ಕೂಗು ತರ್ಕಶುದ್ಧವಾದುದೂ ಅಲ್ಲ ಸುಸಂಬದ್ಧವಾದುದೂ ಅಲ್ಲವೆಂದು ತೋರಿಸಿಕೊಡಲು ಗಾಂಧೀಜಿ ತಮ್ಮ ಮುಂದಿನ ಭಾಷಣವನ್ನು ಮೀಸಲಿಟ್ಟರು.

ಅತಿ ಚಿಕ್ಕವರಾಗಿದ್ದಾಗಿಂದಲೂ ತಮಗೆ ಅನ್ಯಾಯವನ್ನು ಕಂಡರಾಗುತಿದ್ದಿಲ್ಲ ಹೊರತು ಅನ್ಯಾಯಗಾರನ ಮೇಲೆ ಯಾವ ಕೆಡು ಬುದ್ಧಿಯೂ ಇರಲಿಲ್ಲವೆಂದು ಅವರು ಹೇಳಿದರು. "ಆದುದರಿಂದ ಮುಸ್ಲಿಮರಿಂದು ಏನಾದರೂ ಅನ್ಯಾಯ ಮಾಡಿದ್ದರೆ ಕೂಡ ಅವರಿನ್ನೂ ನನ್ನ ಗೆಳೆಯರಾಗಿಯೇ ಇರುವರು. ಆದರೆ ಅವರು ಅನ್ಯಾಯ ಮಾಡಿದ್ದಾರೆಂದು ಅವರಿಗೆ ಹೇಳುವದು ಮಾತ್ರ ನನ್ನ ಕರ್ತವ್ಯ. ನನ್ನ ತೀರ ಹತ್ತಿರದವರಿಗೂ ಪ್ರೀತಿಪಾತ್ರರಾದವರಿಗೂ ಇದೇ ನಿಯಮವನ್ನು ನಾನು ಯಾವಾಗಲೂ ಅನ್ವಯಿಸುತ್ತ ಬಂದಿದ್ದೇನೆ. ಹೀಗೆ ಮಾಡುವದೇ ನಿಜವಾದ ಗೆಳೆತನದ ಲಕ್ಷಣವೆಂದು ನನ್ನ ನಂಬಿಕೆ. ಸೇಡುಶಾಂತಿಯನ್ನು ತರಲಾರದು, ಅದು ಮನುಷ್ಯತ್ವದ ದ್ಯೋತಕವಲ್ಲ-ಎಂದು ನಾನು ನಿನ್ನೆ ಹೇಳಿದ್ದೇನೆ. ಕ್ಷಮೆಯೆ ಪರಮಪುಣ್ಯವೆಂದು ಹಿಂದೂ ಧರ್ಮಗ್ರಂಥಗಳು ಬೋಧಿಸುವವು. ಕ್ಷಮಾ ವೀರಸ್ಯ ಲಕ್ಷಣಂ, ಅಂದರೆ ಕ್ಷಮೆ ವೀರನಿಗೆ ಒಪ್ಪುವ ಗುಣ. ವಿದ್ವಾಂಸರಾದ ಮುಸ್ಲಿಂ ಸಜ್ಜನರೊಬ್ಬರು ನಿನ್ನೆ ನನ್ನನ್ನು ಕಾಣಬಂದಿದ್ದರು. ಕುರಾಣದ ಉಪದೇಶವಾದರೂ ಹಾಗೆಯೆ ಇರುವದೆಂದು ಅವರು ನನಗೆ ಹೇಳಿದರು. ಯಾರಾದರೊಬ್ಬರು ಒಬ್ಬನೇ ಒಬ್ಬ ನಿರಪರಾಧಿಯನ್ನು ಕೊಂದರೆ ಕೂಡ ಅವನ ತಲೆಯಮೇಲೆ ಇಡಿ ಮಾನವಕುಲವನ್ನೆ ಕೊಲೆ ಮಾಡಿದ ಪಾತಕ ಬಂದೆರಗುವದು. ಇಸ್ಲಾಮದ ಉಪದೇಶಗಳು ಕೊಲೆ, ಕೊಳ್ಳಿ, ಬಲಾತ್ಕಾರದ ಧರ್ಮಾಂತರ, ಸ್ತ್ರೀಯರ ಅಪಹಾರ ಮೊದಲಾದವುಗಳಿಗೆ ಅನುಮತಿ ಕೊಡುವದಿಲ್ಲ. ಬದಲಿಗೆ ನಿಷೇಧಿಸುತ್ತದೆ."

"ನಿಮ್ಮ ಕಪಾಳಕೊಂದೇಟು ಬಿಗಿದವನನ್ನು ಕ್ಷಮಿಸುವ ಔದಾರ್ಯ ನಿಮ್ಮಲ್ಲಿಲ್ಲದಿದ್ದರೆ ಅವನಿಗೆ ನೀವು ತಿರುಗಿ ಒಂದೇಟು ಬಾರಿಸಬಹುದು" ಎಂದುಮುಂದುವರಿಸಿದರು ಗಾಂಧೀಜಿ. "ಇದು ನನಗೆ ಅರ್ಥವಾಗುವ ಮಾತು. ಆದರೆ ತಪ್ಪುಗಾರನು ತಪ್ಪಿಸಿಕೊಂಡೋಡಿ ಬಿಟ್ಟರೆ, ಅನ್ಯಾಯಕ್ಕೊಳಗಾದ ನಾಗಲಿ ಅವನ ಪಕ್ಷದವರಾಗಲಿ ತಪ್ಪುಗಾರನ ಬಂಧುಗಳನ್ನೋ ಸಹಧರ್ಮಿಗಳನ್ನೊ ಬಡಿದು ಸೇಡು ತೀರಿಸಿಕೊಂಡರೆ ಅದು ಮಾನವತೆಯ ಆತ್ಮಗೌರವಕ್ಕೆ ಲಾಂಛನಾಸ್ಪದ."

"ನನ್ನ ಮಗಳನ್ನು ಯಾರಾದರೂ ಅಪಹರಿಸಿದನೆಂದು ಇಟ್ಟುಕೊಳ್ಳಿರಿ. ಆಗ ಆ ಅಪಹಾರಕನ ಮಗಳನ್ನಾಗಲಿ ಅವನ ಗೆಳೆಯನ ಮಗಳನ್ನಾಗಲಿ ನಾನು ಅಪಹರಿಸುವದು ನ್ಯಾಯ್ಯವೆ? ಅದು ನೀಚತನವೆಂದು ನನ್ನ ಹೇಳಿಕೆ. ನೌಖಾಲಿಯಲ್ಲಿ ನಡೆದ ಅಂಥ ಕೃತ್ಯಗಳನ್ನು ಮುಸ್ಲಿಂ ಗೆಳೆಯರು ಖಂಡಿಸಿದ್ದರು. ಆದರೆ ಬಿಹಾರದಲ್ಲಿ ನಡೆದಿದೆಯೆಂದು ನನಗೆ ತಿಳಿದು ಬಂದಿರುವ ಸಂಗತಿಗಳು ಸತ್ಯವಾಗಿದ್ದರೆ ಅದನ್ನು ಕುರಿತು ನಾನು ಏನು ಹೇಳಬೇಕು? ಬಿಹಾರದಲ್ಲಿ ನಡೆದಿರುವ ಸಂಗತಿಗಳ ಬಗ್ಗೆ ನನಗಾಗಿರುವ ವ್ಯಥೆ ಅಷ್ಟಿಷ್ಟಲ್ಲ. ನನಗೆ ಬಿಹಾರಿಗಳು ಚನ್ನಾಗಿ ಗೊತ್ತು. 'ನೆತ್ತರಿಗೆ ನೆತ್ತರು' ಎಂಬ ಕೂಗು ಅಮಾನುಷವಾದುದು. ನೌಖಾಲಿಯಲ್ಲಿ ಜರಗಿದ್ದಕ್ಕೆ ಬಿಹಾರದಲ್ಲಿ ಸೇಡು ತೀರಿಸಿಕೊಳ್ಳುವದು ಅನ್ಯಾಯ. ಬಿಹಾರದಿಂದ ಭಯಭೀತರಾಗಿ ಓಡಿಹೋಗುತಿದ್ದ ಕೆಲ ಮುಸ್ಲಿಮರನ್ನು ಬಿಹಾರ ಹಿಂದುಗಳು ಹಿಡಿದು ಕೊಂದರೆಂದು ಕೇಳುತ್ತೇನೆ. ಇದನ್ನು ಕೇಳಿ ನನಗೆ ಸಿಡಿಲು ಬಡಿದಂತಾಗಿದೆ. ಈ ಸುದ್ದಿ ಸುಳ್ಳಾಗಲೆಂದು ಹಾರೈಸುವೆ. ಮಹಾಭಾರತದಲ್ಲಿ ಪ್ರತೀಕಾರವನ್ನು ಎತ್ತಿ ಹಿಡಿಯಲಾಗಿದೆಯೆಂದು ವಾದಿಸುವವರುಂಟು. ಈ ವ್ಯಾಖ್ಯೆಯನ್ನು ನಾನು ಒಪ್ಪುವದಿಲ್ಲ. ಮಹಾಭಾರತ ಕಲಿಸುವ ಪಾಠವೆಂದರೆ ಖಡ್ಗಬಲದಿಂದ ಗೆದ್ದ ಗೆಲವು ಗೆಲವೇ ಅಲ್ಲವೆಂಬುದು. ಪಾಂಡವರ ವಿಜಯ ಬರಿ ಜೊಳ್ಳೆಂದು ಆ ಮಹಾಗ್ರಂಥದಲ್ಲಿ ತೋರಿಸಿಕೊಡಲಾಗಿದೆ."

ಬಂಗಾಲ ಮುಖ್ಯ ಮಂತ್ರಿಗಳಾದ ಸಹೀದ ಸಾಹೇಬರೊಡನಾದ ತಮ್ಮ ಮಾತುಕತೆಗಳನ್ನು ಸಭಿಕರಿಗೆ ಗಾಂಧೀಜಿ ತಿಳಿಸಿದರು. "ಅನೇಕ ವರ್ಷಗಳ ಹಿಂದೆ ಅವರು ನನ್ನನ್ನು ಫರೀದಪುರದಲ್ಲಿ ಭೆಟ್ಟಿಯಾಗಿದ್ದರು. ಆಗ ಅವರು ತಮ್ಮನ್ನು ನನ್ನ ಮಗನೆಂದು ಕರೆದುಕೊಳ್ಳಲು ಹೆಮ್ಮೆಪಡುತ್ತಿದ್ದರು," ಎಂದು ಅವರು ಮುಂದುವರಿದರು. "ನಿಮಗೆ ನಿಮ್ಮ ಮುಖ್ಯ ಮಂತ್ರಿಗಳ ಮೇಲೆ ಎಷ್ಟೋ ದೂರುಗಳಿರಬಹುದು. ಆದರೆ ತಮಗೆ ಶಾಂತಿ ಬೇಕಾಗಿದೆಯೆಂದು ಅವರು ನನಗೆ ಭರವಸೆ ಕೊಟ್ಟಿದ್ದಾರೆ. ತಮ್ಮ ಹಿಂದೂ ಗೆಳೆಯರ ಸ್ನೇಹವನ್ನು ಕಳೆದುಕೊಳ್ಳಲು ಅವರಿಗೆ ಬಹಳ ವ್ಯಥೆಯಾಗುತ್ತದೆ. ಅವರ ಭರವಸೆ ಸುಳ್ಳೆಂದು ಸಿದ್ಧವಾಗುವ ವರೆಗೆ ನಾನು ಅದರಲ್ಲಿ ವಿಶ್ವಾಸ ಮಾಡಲಾರೆ. ಆ ಭರವಸೆಯನ್ನು ಕೊಡುವ ಮೂಲಕ ಅವರು ತಮ್ಮನ್ನು ತಾವೇ ಪರೀಕ್ಷೆಗೊಳಪಡಿಸಿಕೊಂಡಂತಾಗಿದೆ. ಜಗತ್ತಿನೊಡನೆಲ್ಲ ಸ್ನೇಹ ಬೆಳೆಸಿ ಇಡೀ ಮಾನವ ಕುಟುಂಬವನ್ನು ತನ್ನ ಸ್ವಂತ ಕುಟುಂಬದಂತೆ ಕಾಣುವದೇ ದಿವ್ಯ ಉಪಾಯ. ತನ್ನ ಬಳಗವನ್ನೂ ಇನ್ನೊಬ್ಬರದನ್ನೂ ಭೇದಭಾವದಿಂದ ಕಾಣುವವನು ತನ್ನವರನ್ನು ತಪ್ಪುದಾರಿಗೆಳೆಯುವದಲ್ಲದೆ ಅನೈಕ್ಯ ಅಧರ್ಮಗಳ ಬೀಜ ಬಿತ್ತುವನು."

## ಬಿಹಾರದ ಸುದ್ದಿ

ಬಿಹಾರದ ವಿಪ್ಲವದ ಸುದ್ದಿಯನ್ನು ಪತ್ರಿಕೆಗಳಲ್ಲಿ ನೋಡಿದವರೇ ಗಾಂಧೀಜಿಯವರು ಕಲಕತ್ತೆಯಿಂದ ತಮ್ಮ ಮೂವರು ಸಹಯೋಗಿಗಳೊಡನೆ ಪಾಟ್ನಾಕ್ಕೆ ಹೊರಟಿದ್ದ ಪಂಡಿತ ಜವಾಹರಲಾಲರಿಗೆ ಮುಖ್ಯ ಮಂತ್ರಿಗಳ ಮೂಲಕ ಒಂದು ತಂತಿ ಕಳಿಸಿದರು. ಎಷ್ಟೋ ಕಡೆಗಳಲ್ಲಿ ಪರಿಸ್ಥಿತಿ ಬಹಳ ಗಂಭೀರವಾಗಿರುವದು ನಿಜ. ವಾದರೂ ಅದನ್ನು ಹಿಡಿತಕ್ಕೆ ತರಲು ಸರಕಾರ ವಿಶ್ವಪ್ರಯತ್ನವನ್ನು ಮಾಡುತಿದೆಯೆಂದು ಅವರಿಂದ ಉತ್ತರ ಬಂತು. ತಮ್ಮ ಸಹಯೋಗಿಗಳಾದ ಅಬ್ದುರ್ರಬ ನಿಶ್ತಾರರೊಡನೆ ಅವಶ್ಯ ಬೀಳಬಹುದಾದಷ್ಟು ಕಾಲ ಬಿಹಾರದಲ್ಲೇ ಉಳಿದುಕೊಳ್ಳಲು ಅವರು ನಿರ್ಧರಿಸಿದ್ದರು. ಮೌನದಿನದ ಪ್ರಾರ್ಥನಾ ಸಭೆಗೆ ಕೊಟ್ಟ ಲಿಖಿತ ಸಂದೇಶದಲ್ಲಿ ಗಾಂಧೀಜಿಯವರು ಉಪದೇಶಿಸಿದ್ದು: "ಕಾಂಗ್ರೆಸ್ಸು ಜನಕೆಗೆ ಸೇರಿದ್ದು. ಮುಸ್ಲಿಂ ಲೀಗು ನಮ್ಮ ಮುಸ್ಲಿಂ ಬಂಧುಭಗಿನಿಯರ ಸೊತ್ತು. ಕಾಂಗ್ರೆಸ್ಸು ಅಧಿಕಾರದಲ್ಲಿರುವಲ್ಲಿ ಕಾಂಗ್ರೆಸ್ಸಿಗರು ತಮ್ಮ ಮುಸ್ಲಿಂ ಬಂಧುಗಳನ್ನು ಕಾಪಾಡಲಾರದೆ ಹೋದರೆ ಕಾಂಗ್ರೆಸ್ ಮುಖ್ಯ ಮಂತ್ರಿಯುದ್ದು ಫಲವಾದರೂ ಏನು? ಅದೇ ಪ್ರಕಾರ ಲೀಗ್ ಪ್ರಾಂತದಲ್ಲಿ ಲೀಗ್ ಮುಖ್ಯ ಮಂತ್ರಿಯಿಂದ ಹಿಂದೂಗಳನ್ನು ರಕ್ಷಿಸುವದು ಸಾಧ್ಯವಾಗದಿದ್ದರೆ ಅವನಿದ್ದಾದರೂ ಏನು? ತಮ್ಮ ತಮ್ಮ ಪ್ರಾಂತದಲ್ಲಿ ಮುಸ್ಲಿಂ ಇಲ್ಲವೆ ಹಿಂದೂ ಅಲ್ಪಸಂಖ್ಯಾಕರ ರಕ್ಷಣೆಗಾಗಿ ಸೈನ್ಯದ ಸಹಾಯ ಕೇಳುವ ಅವಶ್ಯಕತೆ ಅವರಿಗೆ ಬಿದ್ದರೆ, ಆಗ ಅದರ ಅರ್ಥ ಬೇರೇನೂ ಇರದೆ, ಗಂಡಾಂತರದ ಮುಹೂರ್ತದಲ್ಲಿ ಜನಸಾಮಾನ್ಯದ ಮೇಲೆ ಅವರಿಬ್ಬರಿಗೂ ಏನೂ ಹಿಡಿತವಿಲ್ಲವೆಂದಾಯಿತು. ಹೀಗಿದ್ದರೆ, ಹಿಂದುಸ್ಥಾನದ ಮೇಲಿನ ಸರ್ವಸ್ವಾಮ್ಯವನ್ನು ನೀವೇ ಇಟ್ಟುಕೊಳ್ಳಿರೆಂದು ನಾವಿಬ್ಬರೂ ಬ್ರಿಟಿಶರಿಗೆ ಅಮಂತ್ರಣ ಕೊಟ್ಟಂತೆಯೆ ಸರಿ. ಈ ವಿಷಯದಲ್ಲಿ ನಾವೆಲ್ಲರೂ ಆಳವಾಗಿ ಚಿಂತಿಸಬೇಕಾಗಿದೆ."

## ಸ್ವಾತಂತ್ರ್ಯದಿಂದ ಚೆಲೆಜಾವನ್ನು

ಮರುದಿನ ಗಾಂಧೀಜಿಯವರು ಈ ವಿಷಯವನ್ನು ಇನ್ನಷ್ಟು ಒತ್ತಿಹೇಳಿದರು. ಹಿಂದೂಗಳು ಹೇಳಬಹುದು: ತಂಟೆಯನ್ನು ಪ್ರಾರಂಭಿಸಿದವರು ಮುಸ್ಲಿಮರೇ ಅಲ್ಲವೆ? ಪ್ರತ್ಯುತ್ತರದ ಹವ್ಯಾಸಕ್ಕೆ ಬಲಿಬೀಳದೆ ತಮ್ಮ ಸ್ವಂತ ಕರ್ತವ್ಯವನ್ನು ಗಮನಿಸಿ, ಬೇಕಾದ್ದು ಬರಲಿ ನಾವು ಹೋರಾಡುವವರಲ್ಲವೆಂದು ದೃಢವಾಗಿ ಹೇಳುವದು ಹಿಂದೂಗಳ ಕರ್ತವ್ಯ "ಇಂದು ನನ್ನೊಡನಿದ್ದ ಮುಸ್ಲಿಮರೆಲ್ಲ ತಮಗೆ ಶಾಂತತೆ ಬೇಕಾಗಿದೆಯೆಂದು ಭರವಸೆಯಿತ್ತಿರುವರೆಂದು ನಿಮಗೆ ಹೇಳಬಯಸುವೆ. ಅವರೆಲ್ಲರೂ ಹೊಣೆಗಾರ ವ್ಯಕ್ತಿಗಳು. ಪಾಕಿಸ್ತಾನವನ್ನು ಬಡಿದಾಟದಿಂದ ಗಳಿಸುವದು ಸಾಧ್ಯವಿಲ್ಲವೆಂದು ಅವರೆಲ್ಲರೂ ಸ್ಪಷ್ಟವಾಗಿ ಹೇಳಿದ್ದಾರೆ. ನಾವು ಪರಸ್ಪರ ಜಗಳಾಡುತ್ತಲೆ ಹೋದರೆ ಸ್ವಾತಂತ್ರ್ಯ ನಮ್ಮ ಕಣ್ಣೆದುರಿಂದ ಮಾಯವಾಗಿ ಮೂರನೆಯವರ ಅಧಿಕಾರವನ್ನು ಇಲ್ಲಿ ಸ್ಥಿರವಾಗಿ ನಾವು ಸ್ಥಾಪಿಸಿದಂತಾಗುವದು—ಆ ಮೂರನೆಯವರು ಬ್ರಿಟಿಶರೇ ಇರಲೊಲ್ಲರು, ಬೇರಾರೇ ಇರಲೊಲ್ಲರು? ಹಿಂದುಸ್ಥಾನ ವಿಶಾಲವಾದ ದೇಶ. ಅದರಲ್ಲಿ ಖನಿಜಗಳೂ ಲೋಹಗಳೂ ಮುಸ್ಸಾಮಗ್ರಿಗಳೂ ಸಮೃದ್ಧವಾಗಿವೆ. ಹಿಂದುಸ್ಥಾನ ಹುಟ್ಟಿಸಲಾರದ್ದು ಜಗತ್ತಿನಲ್ಲಿ ಯಾವುದೂ ಇಲ್ಲ. ನಾವು ಬಡಿದಾಡುತ್ತಲೇ ಇದ್ದರೆ, ಜಗತ್ತಿನ ಯಾವುದೊಂದು ಪ್ರಬಲ ರಾಜ್ಯಕ್ಕೆ ಇಲ್ಲಿ ಬಂದು ಹಿಂದುಸ್ಥಾನವನ್ನು ಹಿಂದೀಯರ ಕೈಯಿಂದ ಕಾಪಾಡುವ ಆಸೆಯುಂಟಾಗಬಹುದು. ಅದೇ ಸಮಯಂ, ಇಲ್ಲಿಯ ಸಮೃದ್ಧ ಪ್ರಕೃತಿಸಂಪತ್ತಿಯನ್ನು ಸೂರೆಮಾಡಲೂ ಅವರು ಬಯಸಬಹುದು."

"ನಿಮಗೆ ಸ್ವಾತಂತ್ರ್ಯ ಬೇಕಾಗಿದೆ." ಗಾಂಧೀಜಿ ಮುಂದುವರಿದರು. "ನೀವು ಕಾಂಗ್ರೆಸ್ಸಿಗಾಗಿ—ಹಿಂದುಸ್ಥಾನಕ್ಕಾಗಿ ಇಷ್ಟೆಲ್ಲ ಕಷ್ಟಪಟ್ಟ ಸಂಸ್ಥೆಗಾಗಿ, ಸರ್ವಸ್ವವನ್ನು ಬಲಿದಾನಮಾಡಲು ಸಿದ್ಧರಾಗಿದ್ದೀರಿ. ೬೦ ವರ್ಷಕ್ಕಿಂತಲೂ ಹೆಚ್ಚು ಕಾಲದಿಂದ ಕಾಂಗ್ರೆಸ್ಸು ಮಾಡಿದ್ದನ್ನೆ ಮಣ್ಣುಪಾಲು ಮಾಡಲು ನೀವೀಗ ಹವಣಿಸಿರುವಿರಾ? ಅಹಿಂಸಾಪಥವನ್ನು ಅನುಸರಿಸುವಷ್ಟು ಧೀರತೆ ನಿಮ್ಮಲ್ಲಿಲ್ಲದಿದ್ದರೆ ಏಟಿಗೆ ಏಟು ಬೇಕಾದರೆ ಕೊಡಿರೆಂದು ನಾನು ಹೇಳಿದ್ದೇನೆ. ಆದರೆ ಹಿಂಸೆಗಾದರೂ ಒಂದು ನೀತಿ ನಿಯಮವುಂಟು. ಇಲ್ಲದಿದ್ದರೆ ಆ ಹಿಂಸಾಜ್ವಾಲೆಯನ್ನು ಹೊತ್ತಿಸಿದವರನ್ನೇ ಅದು ಸುಟ್ಟುಬೂದಿಮಾಡದಿರದು. ನೀವೆಲ್ಲರೂ ನಿರ್ನಾಮವಾಗಿ ಹೋದರೂ ನನಗೆ ದುಃಖವಿಲ್ಲ. ಆದರೆ ಹಿಂದುಸ್ಥಾನದ ಸ್ವಾತಂತ್ರ್ಯ ಹಾಳಾಗುವದನ್ನು ನಾನು ಸಹಿಸಲಾರೆ."

ಬಿಹಾರದಲ್ಲಿ ನಡೆದ ಸಂಗತಿಗಳು ಸತ್ಯವಾಗಿದ್ದರೆ ಭಯಾನಕವೇ ಸರಿ. ಪಂಡಿತ ಜವಾಹರಲಾಲರು ತಪ್ಪುಗಾರ ಪಕ್ಷಗಳಿಗೆ ಎಚ್ಚರಿಕೆ ಕೊಡುತ್ತ, ಕೇಂದ್ರ ಸರಕಾರ ಇಂಥ ಅಮಾನುಷತೆಯನ್ನು ಸರ್ವಥಾ ಸಹಿಸಲಾರದೆಂದು ಹೇಳಿದ್ದರು. ಅದನ್ನು ಹತ್ತಿಕ್ಕುವದಕ್ಕಾಗಿ ವಿಮಾನದಾಳಿಯನ್ನು ಕೂಡ ಮಾಡಲು ಹಿಂಜರಿಯಲಾರೆವೆಂದು ಅವರು ನುಡಿದಿದ್ದರು. ಆದರೆ ಅದು ಬ್ರಿಟಿಶರ ರೀತಿನೀತಿಯಾಯಿತು, ಎಂದರು ಗಾಂಧೀಜಿ. ಕಾಂಗ್ರೆಸ್ಸು ತಾನು ಯಾರ ಪ್ರತಿನಿಧಿಯೋ ಆ ಜನತೆಯ ಮೇಲೆ ವಿದೇಶಿ ಪದ್ಧತಿಯ ದಂಡನೀತಿಯನ್ನು ಪ್ರಯೋಗಿಸಬೇಕೆ? ಸೈನ್ಯ ಸಹಾಯದಿಂದ ಗಲಭೆಗಳನ್ನು ಮುರಿದರೆ ಅವರು ಹಿಂದುಸ್ಥಾನದ ಸ್ವಾತಂತ್ರ್ಯವನ್ನೇ ಮುರಿದಂತಾಗುವದು. ಆದರೂ ಕಾಂಗ್ರೆಸ್ಸು

—೯ನೇ ಪುಟಕ್ಕೆ





# ನಾರದ ಪತ್ರ

( ೮ನೇ ಪುಟದಿಂದ )

ಜನತೆಯ ಮೇಲಿನ ಹಿಡಿತವನ್ನು ಕಳೆದುಕೊಂಡಿದ್ದರೆ ಪಂಡಿತಜಿಯವರಾದರೂ ಏನು ಮಾಡುವರು? ಜನರು ಶಿಸ್ತು, ವಿವೇಕಗಳಿಂದ ಬದ್ಧರಾಗಲು ಬಯಸದಿದ್ದರೆ ಅವರು ಸರಕಾರದ ಹೊಣೆಯನ್ನೆ ಬಿಟ್ಟುಕೊಡುವದು ಇದಕ್ಕಿಂತ ಒಳ್ಳೆಯ ಉಪಾಯವೆಂಬುದೇನೋ ನಿಜ.

ತಪ್ಪುಗಾರನ ಬಳಗದವರ ಅಥವಾ ಧರ್ಮಬಾಂಧವರ ಮೇಲೆ ಸೇಡು ತೀರಿಸಿಕೊಳ್ಳುವದು ಹೇಡಿತನ. ಜನರು ಇಂಥ ಕೃತ್ಯಗಳಲ್ಲಿ ಪ್ರಸಕ್ತರಾದರೆ ಅವರು ಸ್ವಾತಂತ್ರ್ಯಕ್ಕೆ ಶರಣು ಹೊಡೆಯುವದೇ ಒಳಿತು.

## ಬಿಹಾರಕ್ಕೆ

ಕೆಟ್ಟ ಕಾಲದ ಕೈಲಿ ಸಿಕ್ಕಿಬಿದ್ದಿರುವ ನಾವು ಸಣ್ಣ ಪುಟ್ಟ ಸುದ್ದಿಗಳನ್ನೂ ಕೃತಜ್ಞತೆಯಿಂದ ಸ್ವಾಗತಿಸಬೇಕಾಗಿದೆ. ಬಕ್ರೀದ ಹಬ್ಬ ಹಿಂದುಸ್ಥಾನದಲ್ಲೆಲ್ಲ ಶಾಂತವಾಗಿ ನಡೆದುಹೋಯಿತೆಂಬ ಸುದ್ದಿ ಕೇಳಿ ಎಲ್ಲರೂ ಸಮಾಧಾನದ ನಿಟ್ಟುಸಿರು ಬಿಟ್ಟರು. ಆದರೆ ಬಿಹಾರದ ಸುದ್ದಿಯಿಂದ ಗಾಂಧೀಜಿಯ ಹೃದಯದಲ್ಲಿ ದೊಡ್ಡ ದ್ವಂದ್ವಯುದ್ಧ ಪ್ರಾರಂಭವಾಯ್ತು. ಹಿಂದುಸ್ಥಾನದ ಸಾಮೂಹಿಕ ಸತ್ಯಾಗ್ರಹ ಹುಟ್ಟಿದ್ದೇ ಬಿಹಾರದಲ್ಲಿ. ಹಿಂದುಸ್ಥಾನದಲ್ಲಿ ತಮ್ಮ ರಾಜಕೀಯ ಜೀವನ ವ್ಯವಹಾರ್ಯವಾಗಿ ಮೊದಲಾದುದಾದರೂ ಬಿಹಾರದಲ್ಲಿಯೆ. ಯಾರಿಗಾಗಿ ತಾವು ಅವಿಶ್ರಾಂತವಾಗಿ ಪರಿಶ್ರಮಿಸಿದ್ದರೋ ಯಾರು ತಮ್ಮ ಮೇಲೆ ಅಗಾಧ ಪ್ರೀತಿಸೌಹಾರ್ದಗಳನ್ನು ಮಳೆಗರೆದಿದ್ದರೋ ಅವರೇ—ಆ ಬ್ರಜಕಿಶೋರ, ರಾಜೇಂದ್ರಬಾಬುಗಳ ಬಿಹಾರದ ಜನರೇ ಇಂದು ಹಿಂದುಸ್ಥಾನದ ಧವಲ ಕೀರ್ತಿಗೆ ಕಲಂಕ ಹಚ್ಚಿದ್ದಾರೆ. ಹಿಂದುಸ್ಥಾನದ ಜನರು ಬ್ರಿಟಿಶರ ವಿರುದ್ಧ ಹುಚ್ಚೆದ್ದು ಹಿಂಸೆ ನಡೆಸಿದರೆ ತಾವು ಸತ್ತುಹೋಗುವದಾಗಿ ತಾವು (ಗಾಂಧೀಜಿ) ಲೆಕ್ಕವಿಲ್ಲದಷ್ಟು ಸಲ ಹೇಳಿದ್ದುಂಟು. ಈಗ ನಿರಪರಾಧಿಮುಸ್ಲಿಮರು ಇಂಥದೇ ಹುಚ್ಚಾಟಕ್ಕೆ ಬಲಿಯಾಗಿರುವದನ್ನು ತಾವು ಹೇಗೆ ನೋಡುತ್ತ ಕೂಡಬೇಕು? ಎಷ್ಟಾದರೂ ನಮ್ಮ ದೇಶಬಾಂಧವರೇ ಅದ, ನಮ್ಮ ಬಳಗದವರೇ ಆದ ನಿರಪರಾಧಿ ಮುಸಲ್ಮಾನರು ಅದಕ್ಕೆ ತುತ್ತಾಗಿರುವದನ್ನು ತಾವು ಹೇಗೆ ನೋಡುತ್ತ ನಿಲ್ಲಬೇಕು? "ಕಲಕತ್ತೆಗೆ ಬಂದನಂತರ ದೇಹ ಸ್ವಾಸ್ಥ್ಯದ ದೆಸೆಯಿಂದ ಹಾಲಿಲ್ಲದ ಅಲ್ಪಾಹಾರದ ವ್ರತವನ್ನು ಕೈಕೊಂಡಿದ್ದೆ. ಆದರೆ ದೇಶದಲ್ಲಿ ಸಂಭವಿಸಿದ ಘಟನೆಗಳು ಈ ವ್ರತವನ್ನು ಹಾಗೆಯೆ ಸಾಗಿಸುತ್ತ ಹೋಗುವಂತೆ ಮಾಡಿವೆ. ಈಗ ಪರಿಸ್ಥಿತಿ ತೀವ್ರವಾಗಿ ಬದಲಾಗದೆ ಹೋದರೆ ಬಿಹಾರದ ಕಾರಣದಿಂದ ನಾನು ಪೂರ್ಣ ಉಪವಾಸವನ್ನೆ ಕೈಕೊಳ್ಳಬೇಕಾದೀತು," ಎಂದು ಅವರು ರವಿವಾರ ತಾ. ೪ಕ್ಕೆ ರಾಜಕುಮಾರಿ ಅಮೃತಕುವರ ಇವರಿಗೆ ಬರೆದ ಪತ್ರದಲ್ಲಿ ಉಲ್ಲೇಖಿಸಿದರು. "ಈ ಉಪವಾಸಕ್ಕೆ ಕಾಲಾವಧಿ ಇರಲಾರದು" ಎಂದೂ ಅವರು ಸೇರಿಸಿದ್ದರು. "ಇದಕ್ಕಾಗಿ ಗಾಬರಿಯಾಗಬೇಡ. ಬದಲಾಗಿ ಈ ಅಗ್ನಿಪರೀಕ್ಷೆಗೆ ಕೈಯೊಡ್ಡಿ ನನ್ನ ಧ್ಯೇಯಕ್ಕೆ ತಕ್ಕಂತೆ ಆಚರಿಸುವ ಶಕ್ತಿ ನನ್ನಲ್ಲಿದೆಯೆಂದು ನನಗನಿಸಿದೆಯಲ್ಲಾ, ಅದಕ್ಕಾಗಿ ಸಂತೋಷಪಡಬೇಕು ನೀನು." ಮರುದಿನ ಪಂಡಿತ ಜವಾಹರಲಾಲರಿಗೆ ಅವರು ಬರೆದುದಿಂತು: "ಬಿಹಾರದ ಸುದ್ದಿ ನನ್ನಲ್ಲಿ ತಳಮಳ ಎಬ್ಬಿಸಿದೆ. ನನ್ನ ಕರ್ತವ್ಯಮಾರ್ಗ ಸ್ಪಷ್ಟವಾಗಿ ಗೋಚರವಾಗುತಿದೆ. ಬಿಹಾರದೊಡನೆ ನನಗಿರುವ ಬಾಂಧವ್ಯ ಆಳವಾದುದು. ಅದನ್ನು ನಾನೆಂತು ಮರೆಯಲಿ? ನಮಗೆ ಕೇಳಬರುತಿರುವದರಲ್ಲಿ ಅರ್ಧಕ್ಕರ್ಧ ಮಾತ್ರ ಸತ್ಯವಾಗಿದ್ದರೆ ಸಹ ಬಿಹಾರಿಗಳು ಮನುಷ್ಯತ್ವವನ್ನು ಮರೆತುಬಿಟ್ಟದ್ದಾರೆಂದು ಸಿದ್ಧವಾಗುತ್ತದೆ. ಇದೆಲ್ಲವನ್ನೂ ಪುಂಡರ ಸೆರಗಿಗೆ ಗಂಟಿಕ್ಕುವದು ಅಸತ್ಯಕ್ಕೆ ಮನ್ನಣೆ ಕೊಟ್ಟಂತೆ. ಉಪವಾಸದ ಸಂಭವವನ್ನು ನಿವಾರಿಸಬೇಕೆಂದು ನಾನೆಷ್ಟೋ ಹಣಗಿದೆ. ಆದರೆ ಇನ್ನು ತಾಳಲಾರೆ. ... ನನ್ನ ಅಂತರಾತ್ಮ ಹೇಳುತ್ತದೆ—'ಈ ಹುಚ್ಚುಗೆಟ್ಟ ಕೊಲೆಪಾತಕಕ್ಕೆ ಸಾಕ್ಷಿಯಾಗಿ ನೀನಿನ್ನು ಬದುಕಿ ಉಳಿಯಬೇಡ. ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿರುವದನ್ನು ಜನರು ಕಂಡುಕೊಳ್ಳಲಾರದೆ ಹೋದರೆ, ನೀನು ಹೇಳುವದಕ್ಕೆ ಕಿವಿಗೊಡದಿದ್ದರೆ ನಿನ್ನ ಕಾಲ ಮುಗಿದು ಹೋಗಿದೆಯೆಂದು ಅರ್ಥ ನಲ್ಲವೆ?' ಈ ತರ್ಕಸರಣಿಯ ಸುಸಂಬದ್ಧತೆ ನನ್ನನ್ನು ಉಪವಾಸದತ್ತ ಭೀಮವೇಗದಿಂದ ಸೆಳೆಯುತ್ತಿದೆ. ಅದುದರಿಂದ ಈ ಹುಚ್ಚುಗೆಟ್ಟ ಧ್ವಂಸಕಾಂಡ ನಿಲ್ಲದಿದ್ದರೆ ನಾನು ಆಮರಣ ಉಪವಾಸಕೈಕೊಳ್ಳುವೆನೆಂದು ಹೇಳಿಕೆಹೊರಡಿಸಲಿಗುವೆ. ಕೆಲಕಾಲದ ವರೆಗೆ ಉಪವಾಸವನ್ನು ತಡೆಹಿಡಿಯಬೇಕಾದೀತು. ದಿಲ್ಲಿಯಲ್ಲಿ ನೀವು ಅ ಕುರಿತು ಕೇಳಿದಾಗ ನಾನು ಸದ್ಯಕ್ಕೆ ಆ ವಿಚಾರವಿಲ್ಲವೆಂದು ಹೇಳಿದ್ದೆ. ಈಗ ಅದೆಲ್ಲ ಬದಲಾಗಿ ಹೋಗಿದೆ. ನಿಮ್ಮ ವಿಚಾರ ಬೇರೆ ಬಗೆಯಾಗಿದ್ದರೆ ನನ್ನೊಡನೆ ವಾದಿಸಿರಿ. ನಿಮ್ಮ ಮಾತುಗಳಿಗೆ ನಾನು ಗೌರವ ಕೊಡುವೆ. ಆದರೆ ನನ್ನ ಸ್ವಭಾವವನ್ನರಿತ ನೀವು ನನ್ನ ಈ ನಿರ್ಧಾರವನ್ನೊಪ್ಪುವಿರೆಂದು ನಂಬುತ್ತೇನೆ. ಹೇಗೇ ಇದ್ದರೂ ನಾನೆಲ್ಲಿ ಸಾಯುವೆನೋ ಎಂದು ಒಂದು ಕ್ಷಣ ಚಿಂತೆಗೊಳಗಾಗದೆ ನನ್ನನ್ನು ದೇವರ ರಕ್ಷಣೆಗೆ ಬಿಟ್ಟು ನಿಮ್ಮ ಕೆಲಸ ಸಾಗಿಸಿರಿ. ಚಿಂತೆಮಾಡಕೂಡದು" ಆದರೆ ಪಂಡಿತ ಜವಾಹರರಾಗಲಿ ಈ ಪತ್ರದ ಒಂದು ಪ್ರತಿಕಳಿಸಲಾಗಿದ್ದ ಸರದಾರರಾಗಲಿ ಗಾಂಧೀಜಿಯನ್ನು ಉಪವಾಸದಿಂದ ಪರಾವೃತ್ತರನ್ನಾಗಿ ಮಾಡಲು ಪ್ರಯತ್ನಿಸಲಿಲ್ಲ. ಈ ಪಣದ ಮಹತ್ವವನ್ನು ಅವರು ಚನ್ನಾಗಿ ಅರಿತಿದ್ದರು. ಹಿಂದುಸ್ಥಾನದ ಸ್ವಾತಂತ್ರ್ಯವೇ ಪಣಕ್ಕೆ ಬಿದ್ದಿದೆಯೆಂದು ಅವರಿಗೆ ಗೊತ್ತಿತ್ತು. ಪಂಡಿತ ಜವಾಹರಲಾಲರು ನೀವು ಬಿಹಾರಕ್ಕೆ ಸದ್ಯಕ್ಕೆ ಬರುವದವಶ್ಯವಿಲ್ಲೆಂದು ಪಾಟಣಾದಿಂದ ಟೆಲಿಫೋನ ವಾರ್ತೆಕಳಿಸಿದರು. ಅದಲ್ಲದೆ ತಾವು ದಿಲ್ಲಿಯಲ್ಲಿರುವದಕ್ಕಿಂತ ಬಿಹಾರದಲ್ಲಿ ಉಳಿಯುವದು ಅವಶ್ಯವೆಂದು ಬಗೆದಿರುವುದಾಗಿ ಅವರು ತಿಳಿಸಿದರು. "ಅವಶ್ಯವಿರುವಷ್ಟು ದಿನ ನಾನಿಲ್ಲಿ ಉಳಿದುಕೊಳ್ಳುವೆ." ೬ನೇ ತಾರೀಕು ಮುಂಜಾನೆ ನೌಖಾಲಿಗೆ ಹೊರಡುವ ಮುಂಚೆ ಪಂಡಿತ ನೆಹರೂ ಅವರಿಗೆ ಕಳಿಸಿದ ಪತ್ರದಲ್ಲಿ ಸೂಚಿಸಿದ ಹೇಳಿಕೆಯನ್ನು ಗಾಂಧೀಜಿ ಹೊರಡಿಸಿದರು. ಅದು ಪತ್ರಿಕೆಗಳಲ್ಲಿ ಪ್ರಸಿದ್ಧವಾಗಿದೆ.

ಚೌಮುಹಾನಿ ಪ್ಯಾರೇಲಾಲ
ನವಂಬರ ೮, ೧೯೪೬

# ಗ್ರಾಮೋದ್ಯೋಗಗಳು

( ೭ನೇ ಪುಟದಿಂದ )

ಅದಕ್ಕಾಗಿ ಈ ಯೋಜನೆಯಲ್ಲಿ ಕೆಲ ಮಾರ್ಪಾಡುಗಳನ್ನು ಮಾಡಬೇಕಾಗುವದವಶ್ಯವಿದೆ. ಹಳ್ಳಿಗಳ ಪುನರುಜ್ಜೀವನ ಕಾರ್ಯವು ಶಾಶ್ವತ ತಳಹದಿಯ ಮೇಲೆ ನಡೆಯಬೇಕಲ್ಲದೆ ತಾತ್ಪೂರ್ತಿಕ ತಳಹದಿಯ ಮೇಲೆ ಸಂಘಟಿತವಾಗತಕ್ಕದ್ದಲ್ಲ.

ಎರಡನೆಯ ಅಡಚಣೆಯೆಂದರೆ ಈ ಯೋಜನೆಯಲ್ಲಿ ಕೈಗಾರಿಕೆ ಮತ್ತು ಶಿಕ್ಷಣ ಇವೆರಡನ್ನು ಒಂದಕ್ಕೊಂದು ಸಂಬಂಧವಿಲ್ಲದಂತೆ ಪ್ರತ್ಯೇಕಿಸಲಾಗಿದೆ. ಕೈಗಾರಿಕೆ, ಕಲೆ, ಆರೋಗ್ಯ ಮತ್ತು ಶಿಕ್ಷಣ ಎಲ್ಲವೂ ಒಂದೇ ಯೋಜನೆಯಲ್ಲಿ ಸಂಪೂರ್ಣವಾಗಿ ಸಮ್ಮಿಲಿತವಾಗಿರಬೇಕಾದುದು ಅವಶ್ಯವಿದೆ. ನಯಿ ತಾಲೀಮಿಯಲ್ಲಿ ಇವೆಲ್ಲದರ ಸುಂದರ ಸಮ್ಮಿಶ್ರಣವಿದೆ. ವ್ಯಕ್ತಿಯ ಜೀವನ ಪ್ರಾರಂಭದಿಂದ ಮರಣ ಕ್ಷಣದ ವರೆಗಿನ ಇಡೀ ಶಿಕ್ಷಣ ಯೋಜನೆ ಇದರಲ್ಲಿ ಅಡಕವಾಗಿದೆ. ಅದುದರಿಂದ ನಾನು ಗ್ರಾಮೋದ್ಧಾರ ಕಾರ್ಯವನ್ನು ಪ್ರಾರಂಭದಿಂದಲೆ ತುಂಡುತುಂಡಾಗಿಮಾಡಬಯಸುವದಿಲ್ಲ. ಈ ಚತುಷ್ಪಯದ ಸಮನ್ವಯವಾಗುವಂತೆ ಯೋಜಿಸುವೆನು. ಆದುದರಿಂದ ಉದ್ಯೋಗ ಮತ್ತು ಕೈಗಾರಿಕೆ ಶಿಕ್ಷಣದಿಂದ ಪ್ರತ್ಯೇಕವಾಗಿದೆಂದು ನಾನು ಎಣಿಸುವದಿಲ್ಲ. ಉದ್ಯೋಗವು ಶಿಕ್ಷಣದ ಮಾಧ್ಯಮವೆಂದು ನಾನು ಭಾವಿಸುವೆ. ಆದುದರಿಂದ ನಯಿ ತಾಲೀಮನ್ನು ಇಂಥ ಯೋಜನೆಯಲ್ಲಿ ಏಕೀಕರಿಸುವದು ಅವಶ್ಯವಾಗಿದೆ.

ಕಲಕತ್ತೆಯ ಗಾಡಿಯಲ್ಲಿ ಮೋ. ಕ. ಗಾಂಧಿ
೨೯-೧೦-೪೬ (ಗುಜರಾಥಿಯಿಂದ)

# ಹಿಂದೀ ಹಳ್ಳಿ ಬರಗಾಲವನ್ನು ಎಂತು ಎದುರಿಸುತಿದೆ ?

ದಕ್ಷಿಣ ಹಿಂದುಸ್ಥಾನದಲ್ಲಿಯ ದಕ್ಷಿಣ ತಪ್ಪಲದಲ್ಲಿ ಬೆಳಗಟ್ಟಾ ಹಳ್ಳಿಯು ಒಂದು ಮಾದರಿ ಹಳ್ಳಿ. ಕೇಪಕಾಮರಿನ್‌ದಿಂದ ಅದು ಸುಮಾರು ನಾಲ್ಕುನೂರು ಮೈಲುಗಳ ಮೇಲೆ, ಪಶ್ಚಿಮ ಕರಾವಳಿಯಿಂದ ನೂರಕ್ಕಿಂತ ಹೆಚ್ಚು ಮೈಲುಗಳ ಮೇಲೆ, ಮತ್ತು ಪೂರ್ವ ಕರಾವಳಿಯಿಂದ ಇನ್ನೂರಕ್ಕಿಂತ ಹೆಚ್ಚು ಮೈಲು ಅಂತರದಲ್ಲಿದೆ ಅಲ್ಲಿ ವರ್ಷಕ್ಕೆ ೨೦ ಇಂಚಿಗಿಂತ ಹೆಚ್ಚು ಮಳೆ ಬೀಳುತ್ತದೆ. ಅದು ಕೇವಲ ಒಕ್ಕಲತನದ ಹಳ್ಳಿ. ಅಲ್ಲಿಯೆ ಬೆಳೆದ ಸಣ್ಣ ಸಣ್ಣ ಧಾನ್ಯಗಳು ಮತ್ತು ಬೇಳೆ ಕಾಳುಗಳು, ಮಾವಿನ ಹಣ್ಣು, ಬಾಳೇಹಣ್ಣು ಮತ್ತು ಶಿಂದಿಮೊದಲಾದವುಗಳನ್ನು ಅಲ್ಲಿನ ಹಳ್ಳಿಗರು ಸಾಮಾನ್ಯ ಕಾಲದಲ್ಲಿ ಉಪಜೀವನ ಸಾಗಿಸುತ್ತಾರೆ. ಅಲ್ಲಿನ ಒಕ್ಕಲಿಗರು ಹತ್ತಿ, ಶೆಂಗಾ ಔಡಲ ಮತ್ತು ಉಳಿದ ಎಣ್ಣೆ ಕಾಳುಗಳನ್ನೂ ಬೆಳೆಯುತ್ತಾರೆ. ಇವನ್ನು ಮಾರಿ ಅವರು ಬಟ್ಟೆ, ಅಕ್ಕಿ ಮತ್ತು ಉಳಿದ ಹಲವು ಪದಾರ್ಥಗಳನ್ನು ಕೊಳ್ಳುತ್ತಾರೆ. ಇವುಗಳಿಂದ ಅವರ ಉಪಜೀವನ ಸಾಗುತ್ತದೆಂದಲ್ಲ. ಆದರೆ ಪರಮಾತ್ಮನಿಗೆ ಋಣಿಯಾಗುವಷ್ಟು ಮಾತ್ರ ಅವರು ಬೆಳೆಯುತ್ತಾರೆ.

"ಸಾಮಾನ್ಯ ಕಾಲ"ದಲ್ಲಿಯ ಮಾತಾಯಿತು ಇದು. ಆದರೆ ಎಲ್ಲವೂ ಮಳೆಗಾಳಿಯನ್ನೆ ಅವಲಂಬಿಸುವದಾದ್ದರಿಂದ ಅಸಾಮಾನ್ಯ ಕಾಲವೆ ಕ್ವಚಿತ್ತಾಗಿ ಬರುವದು. ೧೯೪೫ ನೇ ಇಸ್ವಿಯು ತೀರ ಅಸಾಮಾನ್ಯ ಕಾಲವಾಗಿದ್ದಿತು. ಮಳೆ ಸ್ವಲ್ಪೂ ಆಗಲಿಲ್ಲ. ಬೆಳೆಗಳೆಲ್ಲ ಭೂಮಿಯಲ್ಲಿಯೆ ಒಣಗಿದವು. ಗಿಡಗಳಲ್ಲಿ ಒಂದೂ ಎಲೆ ಉಳಿಯಲಿಲ್ಲ. ದನಕರುಗಳು ಉಪವಾಸ ಬಳಲಹತ್ತಿದವು. ಯುದ್ಧ ಕಾಲದ ಸಂಕುಚಿತ ಧೋರಣದ ಮೂಲಕ ಹಿಂದಿನ ವರ್ಷಗಳಲ್ಲಿ ಉಳಿದಿದ್ದ ಕಾಳುಗಳನ್ನೆಲ್ಲ ಬಳೆದುಕೊಂಡು ಹೋದರು. ಹಳ್ಳಿಗರ ಉಪಜೀವನಕ್ಕೆ ಏನೂ ಉಳಿದಿರಲಿಲ್ಲ. ಬರದ ಬವಣೆಯ ಹೊರತು ಬೇರೆ ಯಾವುದೂ ನೋಡಲಿಕ್ಕೆ ಸಿಕ್ಕುವಂತಿರಲಿಲ್ಲ. ಸುಮಾರು ೧೨ ತಿಂಗಳುಗಳ ವರೆಗೆ ಉಪವಾಸದ ಬವಣೆ ಅವರನ್ನು ಬಿಡಲಿಲ್ಲ. ಕೆಲಸಮಯ ಅದು ತೀರ ಸಮೀಪಕ್ಕೆ ಬಂದಿತು. ಆದರೆ ಇಂದು ದೂರ ಹೋಗಿದೆ. ಮಾಯವಾಗಿದೆಂದೂ ಹೇಳಬಹುದು. ಹೊಸ ಬೆಳೆಗಳು ಚೆನ್ನಾಗಿರುವವಷ್ಟೇ ಅಲ್ಲ, ಅವು ಮಾಗಿ ಕೊಯ್ಯಲಿಕ್ಕೆ ಬಂದಿವೆ. ಆದರೆ ಸಂಸ್ಥಾನ ಸರಕಾರವು (ಬೆಳಗಟ್ಟೆ ಮೈಸೂರ ಸಂಸ್ಥಾನದಲ್ಲಿಯ ಒಂದು ಹಳ್ಳಿ) ತೀರ ಮಂದಗತಿಯಿಂದ ಮನವರಿಕೆಯಾಗದ ರೀತಿಯಲ್ಲಿ ಸಾಗಿ ಅವಶ್ಯಕ ಜನರಿಗೆ ತೀರ ಅಯತ್ತಹೊತ್ತಿಗೆ ಅಹಾರ ಕೊಡುವ ಉಪಾಯಗಳನ್ನ ಕೈಕೊಂಡಿದ್ದಾರೆ.

ಮೈಸೂರೊಂದೇ ಇದನ್ನು ಮಾಡಲಾರದು. ಆಡಳಿತ ಯಂತ್ರವು ಅಲ್ಲಿಯೆ ಕಾರ್ಯತತ್ಪರರಾಗಬಹುದಾದರೂ ಕಾಳು ಬಹಳ ದೂರದಿಂದ ಬರಬೇಕಾಗಿದ್ದಿತು. ಪೂರ್ವದಿಂದ ಬೆಳಗಟ್ಟೆಕ್ಕೆ ಎಷ್ಟು ಮಳೆ ಬರುವದೋ ಅದಕ್ಕಿಂತ ಮೂರು ನಾಲ್ಕು ಮಡಿ ಮಳೆ, ಪಶ್ಚಿಮದಿಂದ ಬರುವ ೫೦ ಮೈಲುಗಳಷ್ಟು ಅಂತರದ ಮೇಲಿರುವ ಪಶ್ಚಿಮ ಮೈಸೂರ ಪ್ರದೇಶದಲ್ಲಿಯೂ ೧೯೪೫ರಲ್ಲಿ ಮಳೆ ಬೀಳಲಿಲ್ಲ. ಅಲ್ಲಿ ಸ್ವಲ್ಪ ಅಕ್ಕಿ ಸಂಗ್ರಹವಿದ್ದಿತು. ಆದರೆ ಅದೂ ಬೇಗನೆ ತೀರಿಹೋಯಿತು. ದಕ್ಷಿಣ ಭಾಗದಲ್ಲಿಯ ಉಳಿದ ನೂರಾರು ಹಳ್ಳಿಗಳಂತೆ ಬೆಳಗಟ್ಟೆಹಳ್ಳಿಯು ಹಿಂದುಸ್ಥಾನದ ದೂರ ಪ್ರದೇಶಗಳಿಂದ ಮತ್ತು ಸಮುದ್ರದಾಚೆಯಿಂದ ತನ್ನ ಆಯಾತವನ್ನು ಮಾಡಿಕೊಳ್ಳಬೇಕಾಗುತ್ತದೆ. ಈ ಹಳ್ಳಿಯ ಜನರೆಂದೂ ಸಮುದ್ರವನ್ನು ನೋಡಿಲ್ಲ. ದೊಡ್ಡನಗರ ಅಥವಾ ದೊಡ್ಡ ನದಿಯನ್ನು ಕಂಡಿಲ್ಲ. ಆದರೆ ಖಂಡಗಳ ಸಂಯುಕ್ತ ಸಹಾಯದಿಂದ ಈ ಇಡೀ ಹಳ್ಳಿ ರಕ್ಷಿತವಾಯಿತು. ಹಳ್ಳಿಯ ಆಹಾರ ಸಂಗ್ರಹಾಲಯವನ್ನು ಹೊಕ್ಕು ನೋಡುವಾ. ಆಸ್ಟ್ರೇಲಿಯಾದಿಂದ ಬಂದ ಕಣಕದ ಚೀಲಗಳು ಇದರಲ್ಲಿವೆ. ಕಾನಡಾದಿಂದ ಬಂದ ಗೋದಿ, ಅಮೇರಿಕೆಯಿಂದ ಬಂದ ಗೋವಿನಜೋಳ ಇರುವವು. ಇತ್ತೀಚೆಗೆ ಬಂದ ಇಜಿಪ್ತದ ಕಾಳುಗಳು. ಒಳ್ಳೆ ಅಶ್ಚರ್ಯಚಕಿತರಾಗಿ ಅಲ್ಲಿನ ಅಧಿಕಾರಿಗಳು ಅವನ್ನು ಸ್ವಾಗತಿಸಿದರು. ಆ ಚೀಲಗಳನ್ನು ಬಿಚ್ಚಿ ನೋಡಲಾಗಿ ತಾವು ಕಾಣದ, ರುಚಿ ನೋಡದ ಹೊಸ ಕಾಳುಗಳೇನೂ ಅವರಿಗೆ ಅಲ್ಲಿ ಕಾಣಲಿಲ್ಲ. ಆದರೆ ತಮಗೆ ಚಿರಪರಿಚಿತವಾದ ಸುತ್ತಲಿನ ಹೊಲಗಳಲ್ಲಿ ಕಂಗೊಳಿಸುತ್ತಿರುವ ಜಾಗಿರುವ ತೆನೆಗಳಲ್ಲಿಯ ಜೋಳವೆ ಆ ಚೀಲಗಳಲ್ಲಿದ್ದದನ್ನು ಅವರು ನೋಡಿದರು. ಇತ್ತೀಚೆ ಬ್ರಹ್ಮದೇಶದಿಂದ ಅಕ್ಕಿಯೂ ಬಂದಿದೆ. ಅಸಾಮ, ಸಿಂಧ, ಹೈದರಾಬಾದದಂಥ ಹಿಂದುಸ್ಥಾನದಲ್ಲಿಯ ಉಳಿತಾಯದ ಪ್ರಾಂತಗಳು ತಮ್ಮ ಕಾಳುಗಳನ್ನು ಕಳಿಸಿಕೊಟ್ಟಿವೆ. ಬೆಳಗಟ್ಟಾದಂಥ ಸಣ್ಣ ಹಳ್ಳಿಯನ್ನು ಉಪವಾಸ ಬಳಲುವಿಕೆಯಿಂದ ಉಳಿಸಲು ಇಡೀ ಜಗತ್ತೆ ಒಂದು ಬಗೆಯಿಂದ ಪ್ರಯತ್ನಿಸುತಿರುವದು.

ಪೋಷ್ಟಮಾಸ್ತರರ ಮನೆಯಲ್ಲಿ ಕಾಫಿ ಕುಡಿಯುತಿರುವಾಗ ನಾನಿದನ್ನೆಲ್ಲ ಯೋಚಿಸುತಿದ್ದೆ. ಆದರೆ ಅವನು "ದಯಾಮಯ ಪರಮಾತ್ಮ ಸಕಾಲದಲ್ಲಿ ನಮಗೆ ಮಳೆ ಕೊಟ್ಟ." ಎಂದುಹೇಳಿ ಹೆಚ್ಚಿನ ವಿಚಾರಕ್ಕೆ ನನಗೆ ಅವಕಾಶ ಮಾಡಿಕೊಟ್ಟನು. ಭಯಾನಕತೆಯಿಂದ ಅಶಾದಾಯಕ ಪರಿಸ್ಥಿತಿಯುಂಟಾದ ಕೂಡಲೆ ಈ ಜನರು ಆಸ್ಟ್ರೇಲಿಯ, ಅಮೇರಿಕ, ಇಜಿಪ್ತ ಇಲ್ಲವೆ ಬ್ರಹ್ಮದೇಶಗಳಿಗೆ ಮಾತ್ರವೆ ಅಲ್ಲ, ಪರಮಾತ್ಮನಿಗೆ ಕೂಡ ಧನ್ಯವಾದನಗಳನ್ನರ್ಪಿಸುತ್ತಾರೆ.

ಈ ಹಳ್ಳಿಯ ಬಗ್ಗೆ ಇನ್ನೂ ಹಲ ಸಂಗತಿಗಳು ನನ್ನ ಮನಮುಟ್ಟಿವೆ. ಇಬ್ಬರು ವಿನೀತ ಮತ್ತು ಗಂಭೀರ ಹುಡುಗಿಯರನ್ನು ನನಗೆ ತೋರಿಸಲಾಗಿತ್ತು. ಅದರಲ್ಲಿ ಒಬ್ಬಳು ಚರ್ಮರೋಗದಿಂದ, ಇನ್ನೊಬ್ಬಳು ಅಜೀರ್ಣದಿಂದ ಬಳಲುತಿದ್ದಳು. ಅವರಿಬ್ಬರನ್ನೂ ವಾಸಿಮಾಡಿರುವೆ. ಉಳಿದ ಅನೇಕ ಹುಡಿಗೆಯರಂತೆ ಅವರು [ಇರುವರು. ತರುಣ ವೈದ್ಯಕೀಯ ಪದವೀಧರರೊಬ್ಬರಿಗೆ ನನ್ನ ಪರಿಚಯ ಮಾಡಿಕೊಡಲಾಯಿತು. ಅವರು ಹಳ್ಳಿಯಲ್ಲೆ ಇರುವರು. ಐದು ಹಳ್ಳಿಗಳಲ್ಲಿ ತಮ್ಮ ಸೇವೆ ಸಲ್ಲಿಸುವರು. (ಹಿಂದೀ ವೈದ್ಯರಲ್ಲಿ ಅನೇಕರು ಹೆಚ್ಚು ಫೀ ಕೊಡುತಿರುವ ನಗರಗಳ ಕಡೆಗೆಯೇ ತಮ್ಮ ಲಕ್ಷ ಪೂರೈಸುತಿರುವರು.) "ಅಹಾರ ಕೊರತೆಯಿಂದ ಬೇನೆ ಹೆಚ್ಚಾಗಿ ಹಬ್ಬಿವೆಯೋ ಎಂದು ನಾನವರನ್ನು ಕೇಳಿದೆ. ಅಹುದು ಎಂದು ಅವರು ನಿರ್ಧಾರಪೂರ್ವಕ ಉತ್ತರ ಕೊಟ್ಟರು. ಹೆಚ್ಚಾಗಿ ಚರ್ಮರೋಗ ಮತ್ತು ಕರುಳು ರೋಗ ಬೆಳೆದಿವೆ ಎಂದು ಹೇಳಿದರು. ಯುರೋಪಿನಲ್ಲಿ ಮೂರು ವರ್ಷ ಸೈನ್ಯಶಾಖೆಯಲ್ಲಿ ಕೆಲಸ ಮಾಡಿ ಬಂದ ಉಚ್ಚ ವೈದ್ಯಕೀಯ ಅಧಿಕಾರಿಯೊಬ್ಬ ಒಂದು ಗಂಟೆಯ ನಂತರ ನನಗೆ ಭೆಟ್ಟಿಯಾದ. ಬರಗಾಲದ ಹಾವಳಿಗೊಳಗಾದ ಭಾಗಗಳಲ್ಲಿ ಐದು ವಾರಗಳಿಂದ ತಾವು ಸಂಚರಿಸುತ್ತಿರುವುದಾಗಿಯೂ ಆದರೆ ಬೇನೆ ಹೆಚ್ಚಾದುದನ್ನು ತಾವೆಲ್ಲಿಯೂ ನೋಡಿಲ್ಲೆಂದೂ-ಬಹಳಾದರೆ ಚರ್ಮರೋಗ ಅಲ್ಲಲ್ಲಿಕಾಣುತಿದೆಂದೂ ಅವರು ಹೇಳಿದರು. ಡಾಕ್ಟರರಲ್ಲಿ ಭಿನ್ನಾಭಿಪ್ರಾಯವಾದಾಗ ಯಾವದನ್ನು ನಂಬಬೇಕೆಂಬ ಬಗ್ಗೆ ನನಗೇನು ಅಡಚಣೆಯೆನಿಸಲಿಲ್ಲ-ಅರೆಹೊಟ್ಟೆ ಅನ್ನ ತಿನ್ನುತಿರುವ ಕಾಲದಲ್ಲಿ ಅನೇಕ ಸ್ಥಳಗಳಲ್ಲಿ ಒಳ್ಳೆ ನೀರು ಕೂಡ ದೊರೆಯದಂಥ ಸ್ಥಿತಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಪಿಡುಗು ಹಬ್ಬದಿದ್ದುದಕ್ಕಾಗಿ ಅವರು ಮತ್ತು ಅವರ ಪರಿವಾರ ವರ್ಗದ ಧನ್ಯವಾದಕ್ಕೆ ಅರ್ಹರಿರುವರೆಂಬುವಾಗಿ ಹೇಳಬಹುದು.

ಬೆಳಗಟ್ಟಾ ಹಳ್ಳಿಯ ಬಗ್ಗೆ ಇಂದು ಆಶಾಕಿರಣ ಕಾಣುತಿವೆ. ಸುತ್ತಲೂ ಇರುವ ಉಳಿದ ಹಳ್ಳಿಗಳಲ್ಲಿಯೂ ಇಂದು ಆಸೆ ಹುಟ್ಟುತಿದೆ. ಆದರೆ ಇದೊಂದು ಜಿಲ್ಲೆಯೆಂದರೆ ಇಡೀ ಹಿಂದುಸ್ಥಾನವಲ್ಲ. ಈ ದಕ್ಷಿಣ ಹಳ್ಳಿಗಳಲ್ಲಿಯ ಮುಖ್ಯಾಹಾರವಾದ ಸಣ್ಣ ಕಾಳುಗಳು ಇದೀಗ ಪಕ್ವವಾಗಿವೆ. ಆದರೆ ಇನ್ನೂರು ಮೈಲು ಅಂತರದಲ್ಲಿಯೆ ಲಕ್ಷಾವಧಿ ಮದ್ರಾಸಿಗಳಿರುವ ೬೦.

೧೦ ನೇ ಪುಟಕ್ಕೆ—

# ಹಿಂದುಸ್ತಾನಿ

ನಮ್ಮ ರಾಷ್ಟ್ರಭಾಷೆಯ ಪ್ರಶ್ನೆ ಸ್ವರಾಜ್ಯದ ಪ್ರಶ್ನೆಯಷ್ಟೇ ಜಟಿಲವಾಗಿ ಉಳಿತಿದೆ. ನಮ್ಮ ರಾಷ್ಟ್ರವನ್ನು ಸ್ವತಂತ್ರರಾಷ್ಟ್ರವಾಗಿ ಕಟ್ಟುವಾಗ ಎಂತೆಂತಹ ಸಮಸ್ಯೆಗಳು ನಮ್ಮನ್ನು ಎದುರಿಸಬಹುದೆಂಬುದನ್ನು ನಾವು ಮೊದಲೇ ವಿಚಾರಿಸಿಕೊಂಡು ಇಟ್ಟಿದ್ದಿಲ್ಲ. ಪರಿಣಾಮವಾಗಿ, ಇಂದು ಅಂಥ ಸಮಸ್ಯೆಗಳ ಒಂದು ದೊಡ್ಡ ಹಿಂಡೇ ಪಿಶಾಚಿಗಳಂತೆ ನಮಗೆ ಎದುರಾಗಿದೆ.

ಕೆಲಕಾಲ ನಾವು ಹಿಂದಿಯನ್ನು ರಾಷ್ಟ್ರಭಾಷೆಯಾಗಿ ಪ್ರಚಾರ ಮಾಡಿದೆವು. ಉರ್ದು ಭಾಷೆ ಹಿಂದೀಯಲ್ಲಿಯೇ ಸೇರಿದೆಯೆಂದು ಹೇಳಿ ಹಿಂದಿಯಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿದ್ದ ಅರಬ್ಬೀ ಮತ್ತು ಪರ್ಶಿಯನ್ ಶಬ್ದಗಳನ್ನು ಉಳಿಸಿಕೊಳ್ಳಲು ಯತ್ನಿಸಿದೆವು.

ಆಗ ಉರ್ದೂ ವಿದ್ವಾಂಸರು ಅದರಲ್ಲಿ ಸೇರಿದ್ದ ಸರಳ ಹಿಂದೀ ಶಬ್ದಗಳನ್ನೆಲ್ಲ ಹೊರಗಟ್ಟಿ ಅವುಗಳ ಬದಲು ಅರಬ್ಬೀ ಮತ್ತು ಪರ್ಶಿಯನ್ ಶಬ್ದಗಳನ್ನು ಸ್ಥಾಪಿಸಲು ಪ್ರಯತ್ನಮಾಡಿದ ದಿನಗಳು ಬಂದವು. ಸಾಧಾರಣ ಉರ್ದೂ ಹೋಗಿ "ಉರ್ದೂ—ಇ—ಮೌಲ್ಲಾ" ಬಂದುಬಿಟ್ಟಿತು. ಅದನ್ನು ಅರ್ಥಮಾಡಿಕೊಳ್ಳಲು ಜನಸಾಮಾನ್ಯರಿಗೆ ಕಠಿನಹೋಯಿತು. ಅದೇ ಹೊತ್ತಿಗೆ ಕೆಲ ಹಿಂದೀ ವಿದ್ವಾಂಸರೂ ಅದರಲ್ಲಿ ಸೇರಿದ್ದು ಎಲ್ಲರಿಗೂ ಅರ್ಥವಾಗುತಿದ್ದ ಪರ್ಶಿಯನ್ ಹಾಗು ಅರಬ್ಬೀ ಶಬ್ದಗಳನ್ನು ಹೊಡೆದೋಡಿಸಿ ಸಂಸ್ಕೃತ ಪದಗಳನ್ನು ತುಂಬುವ ಕೆಲಸದಲ್ಲಿ ತೊಡಗಿದರು.

ನಾವು ಈ ಎರಡೂ ಧಾರೆಗಳನ್ನು ತಡೆದು ಭಾಷೆಯನ್ನು ಸರಳವಾಗಿ ಮಾಡಲು ಹೆಣಗಿದೆವು. ಆದರೆ ಅದರಿಂದಲೇ ಕೆಲಸ ಸಾಗುವಂತಿಲ್ಲೆಂದು ನಮಗೆ ತೋರಿಬಂತು. ಮೊಟ್ಟ ಮೊದಲು ಹಿಂದೀ—ಉರ್ದೂ ಇವೆರಡೂ ಒಂದೇ ಆಗಿದ್ದರೂ ಕಾಲಾಂತರದಲ್ಲಿ ಅವು ಎರಡು ಬೇರೆ ಬೇರೆ ಭಾಷಾಪ್ರಭೇದಗಳಾಗಿ ರೂಪುಗೊಂಡವು. ಇಂದು ಅವುಗಳಲ್ಲಿ ಎಷ್ಟು ಅಂತರವಾಗಿ ಬಿಟ್ಟಿದೆಯೆಂದರೆ ಒಮ್ಮೆಲೆ ಅವುಗಳನ್ನು ಒಂದಾಗಿ ಎರಕ ಹೊಯ್ಯಲು ಸಾಧ್ಯವೇ ಇಲ್ಲ.

ರಾಷ್ಟ್ರಭಾಷೆಯೆಂದರೆ ಉತ್ತರ ಹಿಂದುಸ್ತಾನದ ಹಳ್ಳಿಗಳಲ್ಲಿ ನಿತ್ಯಜೀವನದಲ್ಲಿ ಸಾಮಾನ್ಯವಾಗಿ ಹಿಂದೂ ಮುಸ್ಲಿಮರಿಬ್ಬರೂ ಆಡುವ ಭಾಷೆಯೆಂದು ಲಕ್ಷಣ ಹೇಳಿದ್ದೇವೆ. ಅದು ನಾಗರಿ ಮತ್ತು ಪರ್ಶಿಯನ್ ಇವೆರಡೂ ಲಿಪಿಗಳಲ್ಲಿ ಬರೆಯಲ್ಪಡುವದೆಂದು ಒಪ್ಪಿದ್ದೇವೆ.

ಕೆಲವರು ಹಿಂದುಸ್ತಾನಿಯು ಜನರ ಭಾಷೆಯಾಗಿರುವ ಉತ್ತರ ಹಿಂದುಸ್ತಾನವೆಂದರೆ ಯಾವುದೆಂದು ಕೇಳುತ್ತಾರೆ. ಬಂಗಾಲ, ಅಸಾಮ, ಓಡಿಸಾ, ಸಿಂಧ ಮತ್ತು ಕಾಶ್ಮೀರ ಇವುಗಳನ್ನು ನಾವು ಬಿಟ್ಟುಬಿಡಬೇಕು. ಅಂದರೆ ಪಂಜಾಬ, ರಾಜಸ್ತಾನ, ಯುಕ್ತಪ್ರಾಂತ, ಬಿಹಾರ ಮತ್ತು ಮಹಾ ಕೋಸಲ ಇವು ಉಳಿಯುವವು. ಈ ಪ್ರದೇಶಗಳ ಹಳ್ಳಿಗರು ಪ್ರಚಲಿತ ಹಿಂದಿಯನ್ನಾಗಲಿ ಉರ್ದುವನ್ನಾಗಲಿ ಆಡುವದಿಲ್ಲ. ಕೆಲವೆಡೆ ಸ್ಥಾನಿಕ ಅಪಭ್ರಂಶಗಳನ್ನೊ ಆಡುವರು.

ಮಹಾರಾಷ್ಟ್ರ, ಗುಜರಾಥ, ಬಂಗಾಲ, ಬಿಹಾರ, ಕರ್ನಾಟಕ, ತಮಿಳನಾಡು ಮೊದಲಾದ ಪ್ರಾಂತಗಳಲ್ಲಿ ಮನೆಯಲ್ಲಿ ಆಡುವ ಮಾತೂ ಪೇಟೆಗಳಲ್ಲಾಡುವದೂ ಒಂದೇ ಇರುವದು. ಗ್ರಾಂಥಿಕ ಭಾಷೆಗೂ ಮಾತಾಡುವ ಭಾಷೆಗೂ ಅಲ್ಪಸ್ವಲ್ಪ ಭೇದವಿರುವದುಂಟು. ಆದರೆ ಮೂಲತಃ ಒಂದೇ ಭಾಷೆಯೆಂದು ಎಲ್ಲರೂ ಗುರುತಿಸಬಹುದು. ಆದರೆ ಹಿಂದೀ ಅಥವಾ ಉರ್ದು ಭಾಷೆಗಳ ಮಾತೇ ಬೇರೆ. ಶ್ರೀ ಅಮರನಾಥ ಝಾ, ಶ್ರೀ ತಂಡನ, ಶ್ರೀ ನಿಯೋಗಿಹರಿ, ರಾಜೇಂದ್ರ ಬಾಬು, ಶ್ರೀ ಬಿರ್ಲಾ, ಸರದಾರ ತಾರಾ ಸಿಂಗ ಮೊದಲಾದವರು ಭಾಷಣ ಮಾಡುವಾಗ ಆಡುವ ಭಾಷೆಯೇ ಬೇರೆ. ಮನೆಯಲ್ಲಾಡುವದೇ ಬೇರೆ. ಅವರ ಮನೆ ಮಾತು ಭಾಷಣ ಮತ್ತು ಪತ್ರಿಕಾ ಭಾಷೆಗಿಂತ ಎಷ್ಟು ಭಿನ್ನವಾಗಿದೆಯೆಂದರೆ ಸಭಾಭಾಷೆ ಅವರ ಮನೆಗಳಲ್ಲಿ ಅರ್ಥವೇ ಆಗಲಾರದು.

ಪಂಜಾಬದ ಮುಸ್ಲಿಮರು ಸಾರ್ವಜನಿಕ ಸಭೆಗಳಲ್ಲಿ ಉರ್ದುವನ್ನೇ ಆಡುತ್ತಾರೆ. ಆದರೆ ಅವರ ಮನೆಗಳಲ್ಲಿ ಬಳಗಗಳಲ್ಲಿ ಬಳಕೆಯಲ್ಲಿರುವದು ದೇಶಿಲಿ ಅಥವಾ ಪಂಜಾಬಿಯೆಂಬ ಉಪಭಾಷೆ. ಖಾನ ಅಬ್ದುಲ ಗಾಫರಖಾನರು ಪ್ರಕ್ತುವಿನಲ್ಲಿಯೂ ಶೇಖ ಅಬ್ದುಲ್ಲಾರು ಕಾಶ್ಮೀರಿಯಲ್ಲಿಯೂ ಡಾ. ಸಯ್ಯದ ಮಹಮುದರು ಬಿಹಾರಿಯಲ್ಲಿಯೂ ಮಾತಾಡುತ್ತಾರೆ. ಮನೆಯಲ್ಲೊಂದು ಭಾಷೆ, ಹೊರಗೊಂದು ಭಾಷೆಯೆಂಬೀ ರೂಢೀ ಹಿಂದುಸ್ತಾನದ ಬೇರಾವ ಭಾಗದಲ್ಲಿಯೂ ಕಾಣಬರುವದಿಲ್ಲ.

ಇನ್ನು ಯುಕ್ತ ಪ್ರಾಂತದಲ್ಲಿ, ಕೆಲ ಹಿಂದುಗಳೇ ಸೇರಿ ಸಂಭಾಷಣೆ ನಡೆಸಿದ್ದಾಗ ಅವರು ಹಿಂದಿಯಲ್ಲಿ ಮಾತಾಡುತ್ತಿದ್ದಾಗ ಮುಸ್ಲಿಮನೊಬ್ಬನು ಬಂದು ಸೇರಿದನೆಂದರೆ ಒಡನೆ ಹಿಂದುಸ್ತಾನಿ ಭಾಷೆಗೆ ಬದಲಿಸುವರು. ಯುಕ್ತ ಪ್ರಾಂತದ ಹಿಂದುಗಳು ಸರಳ ಹಿಂದಿಯನ್ನೂ ಅವರು ಹಿಂದುಸ್ತಾನಿಯೆಂದು ಕರೆಯುವ ಸರಳ ಉರ್ದುವನ್ನೂ ಮಾತಾಡಬಲ್ಲರು. ಪರಿಣಾಮವಾಗಿ ಪಂಜಾಬ, ಯುಕ್ತಪ್ರಾಂತ ಮತ್ತು ಬಿಹಾರದ ಮುಸ್ಲಿಮರೆಲ್ಲರೂ ತಾವೆಲ್ಲಿ ಹೋದರೂ ಹಿಂದುಸ್ತಾನಿಯಲ್ಲಿ ಮಾತಾಡಬಲ್ಲರು. "ಹಿಂದುಸ್ತಾನಿಯೆಂಬುದು ಪಂಜಾಬದಿಂದ ಬಿಹಾರದ ವರೆಗಿನ ಪ್ರದೇಶದ ಭಾಷೆಯಾಗಿದ್ದರೆ ಹಿಂದಿಯೆಂಬುದು ಹಿಂದೂ-ಮುಸ್ಲಿಮರನ್ನು ಬೇರೆ ಬೇರೆಯಾಗಿಡಲು ನಿರ್ಮಿಸಲ್ಪಟ್ಟ ಕೃತಕ ಭಾಷೆಯೆಂದು ತೋರಿಸಲು ಕೆಲವರು ಯತ್ನಿಸುತ್ತಾರೆ. ಆದರೆ ವಸ್ತುತಃ, ಈ ಭಾಗಗಳಲ್ಲಿ ಹಿಂದುಗಳು ಮುಸ್ಲಿಮರೊಡನೆ ಮಾತಾಡುವಾಗ ಅವರಿಗೆ ತೊಂದರೆಯಾಗದಂತೆ ಹಿಂದುಸ್ತಾನಿಯೆಂಬ ಸರಳ ಉರ್ದುವನ್ನು ಮಾತಾಡುವಷ್ಟು ಸೌಜನ್ಯ ತೋರಿಸುತ್ತಾರೆ.

ಮುಸ್ಲಿಮರು ಕೃತಕ ಭಾಷೆಯೆಂದು ಕರೆಯುವ ಹಿಂದೀ ಭಾಷೆಯ ಮೂಲ ಮತ್ತು ವಿಕಾಸ ಬಂಗಾಲಿ, ಮರಾಠಿ ಮತ್ತು ಗುಜರಾಥಿ ಭಾಷೆಗಳಿಗಿಂತ ಭಿನ್ನವಾಗಿಲ್ಲ; ಹಾಗಾದರೆ ಹಿಂದೀ ಮಾತ್ರ ಏಕೆ ಕೃತಕ ಭಾಷೆ? ವಿವಿಧ ಪ್ರಾಂತಿಕ ಭಾಷೆಗಳು ಇತಿಹಾಸದ ಸ್ವಾಭಾವಿಕ ಪರಿವರ್ತನೆಯೊಡನೆ ವಿಕಾಸಗೊಂಡಿವೆ. ಹಿಂದಿಯನ್ನು ಬೇರೆ ಭಾಷೆಗಳಿಂದ ವಿಂಗಡಿಸಿ ಕೃತಕವೆಂದು ತಳ್ಳಿಬಿಡುವದು ಅನ್ಯಾಯವೇ ಸರಿ.

ಹಿಂದೀ ಭಾಷೆಯನ್ನಾಡುವವರ ಒಂದೇ ಒಂದು ತಪ್ಪೆಂದರೆ, ಮನೆಯಲ್ಲಿಯೂ ಹೊರಗೂ ಹಿಂದಿಯನ್ನೇ ಆಡುವ ಬದಲು ಮನೆಯಲ್ಲಿ ಸ್ಥಾನಿಕ ಅಪಭ್ರಂಶವನ್ನು ಆಡುತ್ತ ಬಂದುದು. ಉದಾಹರಣೆಗಾಗಿ ರಾಜಸ್ತಾನಿಯಲ್ಲಿ ಅನೇಕಾನೇಕ ಉಪಭಾಷೆಗಳು ಅಥವಾ ಅಪಭ್ರಂಶಗಳು ಇವೆ. ಬಿಹಾರದಲ್ಲಿ ಎರಡು ಮೂರು ಉಪಭಾಷೆಗಳಿವೆ. ಛತ್ತೀಸಗಡಿ ಮತ್ತು ಬುಂದೇಲಖಂಡಿಗಳು ಪರಸ್ಪರ ಪೂರ್ಣ ಭಿನ್ನವಾಗಿವೆ. ಹಿಂದಿಯನ್ನು ಮಾತೃಭಾಷೆಯೆಂದು ಹೇಳಿಕೊಂಡು ಅದನ್ನು ಮನೆಯಲ್ಲಿ ಆಡದಿರುವದು ವಿಚಿತ್ರವೇ. ಈ ಸ್ಥಾನಿಕ ಭಾಷಾ ಪ್ರಭೇದಗಳು ಹೀಗೇ ಉಳಿಯಬೇಕೆಂದರೆ, ಆಗ ಪ್ರಜಾತಂತ್ರದ ಈ ದಿನಗಳಲ್ಲಿ ಆ ಉಪ ಭಾಷೆಗಳಲ್ಲಿಯೂ ಸರಳ ಸಾಹಿತ್ಯವನ್ನು ಸಿದ್ಧಗೊಳಿಸಲೇಬೇಕಾಗುವದು.

ಹಿಂದುಸ್ತಾನಿಯ ಐತಿಹಾಸಿಕ ಲಕ್ಷಣವನ್ನು ಕಂಡು ಹಿಡಿಯಲೆತ್ನಿಸುವಾಗ ನಮಗೆ ಅನೇಕ ತೊಡಕುಗಳು ಎದುರಾಗುತ್ತವೆ. ಜನರು ಕೇಳುವರು: "ಹಿಂದುಸ್ತಾನದ ಯಾವ ಭಾಗದಲ್ಲಿ ಜನಸಾಮಾನ್ಯರು ಹಿಂದುಸ್ತಾನಿ ಭಾಷೆಯನ್ನಾಡುವರೋ ಹೇಳಿರಿ. ಹಿಂದುಸ್ತಾನಿಯಲ್ಲಿ ಸಾಹಿತ್ಯವೆಲ್ಲಿದೆ? ನಮ್ಮ ರಾಷ್ಟ್ರಭಾಷೆಯಾಗಲಿರುವ ಹಿಂದುಸ್ತಾನಿಯಲ್ಲಿ ಒಂದೇ ಒಂದು ದಿನ ಪತ್ರಿಕೆ, ವಾರಪತ್ರಿಕೆ ಇಲ್ಲವೇ ಮಾಸಪತ್ರಿಕೆ ಇದೆಯೆ? ಗಾಂಧೀಜಿಯು "ಹರಿಜನ ಸೇವಕ"ವನ್ನೂ ಪಂಡಿತ ಸುಂದರಲಾಲರ "ನಯಾ ಹಿಂದ"ನ್ನೂ ನೋಡಿರಿ. ಇವು ನಿನ್ನೆ ಮೊನ್ನೆಯ ಉದ್ಭವಗಳು. ಉತ್ತರ ಹಿಂದುಸ್ತಾನ ಈ ಪತ್ರಿಕೆಗಳನ್ನು ಹೇಗೆ ಸ್ವಾಗತಿಸುವದೋ ಇನ್ನೂ ನೋಡಬೇಕಾಗಿದೆ.

ಈ ಎಲ್ಲ ಜಂಜಾಟಗಳಿಂದ ಪಾರಾಗುವಗೋಸ್ಕರ ನಾವು ಹೀಗೆ ಉತ್ತರಕೊಡುತ್ತೇವೆ. ಪಂಜಾಬ, ರಾಜಸ್ತಾನ, ಮಹಾಕೋಸಲ ಮತ್ತು ಬಿಹಾರದಲ್ಲಿ ಹಿಂದಿಯೆಂದು ಕರೆಯಲ್ಪಡುವ ಭಾಷೆಯೊಂದು ಬಳಕೆಯಲ್ಲಿದೆ. ಈ ಭಾಷೆಯಲ್ಲಿ ಅನೇಕ ವಾರ್ತಾ ಪತ್ರಿಕೆಗಳೂ ಹೊರಡುತ್ತಿವೆ. ಅದರಲ್ಲಿ ವಿಶಾಲವಾದ ಸಾಹಿತ್ಯವೂ ಇದೆ. ಅದು ದಿನೇ ದಿನೇ ಬೆಳೆಯುತ್ತ ಇದೆ.

ಅವೇ ಪ್ರಾಂತಗಳಲ್ಲಿ ಉರ್ದುವೂ ಬಳಕೆಯಲ್ಲಿದೆ—ಕೆಲವು ಕಡೆ ಹೆಚ್ಚು, ಕೆಲವು ಕಡೆ ಕಡಿಮೆ ಪ್ರಮಾಣದಲ್ಲಿ ಹಿಂದುಗಳೂ ಮುಸ್ಲಿಮರೂ ಈ ಭಾಷೆಯಲ್ಲಿ ಪತ್ರಿಕೆ ಮೊದಲಾದುವನ್ನು ಪ್ರಕಟಿಸುತಿದ್ದಾರೆ, ಅದರಲ್ಲಿ ಸಾಹಿತ್ಯವನ್ನು ನಿರ್ಮಿಸುತಿದ್ದಾರೆ, ಅದರ ಸೇವೆಯನ್ನು ಪ್ರೀತ್ಯಾದರಗಳಿಂದ ನಡೆಸುತಿದ್ದಾರೆ. ಹಿಂದೀ-ಉರ್ದುಗಳೆರಡರ ದೇಹವೂ ಒಂದೆ. ಮೊದಲನೆಯದು ಸಂಸ್ಕೃತದಿಂದಲೂ ಎರಡನೆಯದು ಪರ್ಶಿಯನ್, ಅರಬ್ಬಿ ಭಾಷೆಗಳಿಂದಲೂ ಪೋಷಣೆ ಪಡೆಯುತ್ತವೆ ಹೀಗೆ ಇವೆರಡೂ ಭಾಷೆಗಳು ಉತ್ತರ ಹಿಂದುಸ್ತಾನದಲ್ಲಿ ಉಪಯೋಗಿಸಲ್ಪಡುತ್ತವೆ. ಇವೆರಡನ್ನೂ ಎರಕ ಹೊಯ್ಯಬೇಕು ಮತ್ತು ಹಿಂದುಸ್ತಾನಿಯೆಂದು ಪ್ರಸಾರ ಮಾಡಬೇಕು.

ಹಿಂದಿಯನ್ನೂ ಉರ್ದುವನ್ನೂ ಮೊದಲು ಸುಲಭವಾಗಿ ಮಾಡಿದರೆ ಮಾತ್ರ ಇದು ಸಾಧ್ಯವಾಗಬಲ್ಲದು. ಲಿಪಿ ಭೇದವೊಂದಲ್ಲದಿದ್ದರೆ ಅವೆರಡರಲ್ಲಿರುವ ಭೇದವನ್ನು ಗುರುತಿಸಲಾರದಷ್ಟು ಮಟ್ಟಿಗೂ ಅವುಗಳನ್ನು ಸರಳವಾಗಿ ಮಾಡಲು ಸಾಧ್ಯವಿದೆ. ಹಿಂದೀ ಮತ್ತು ಉರ್ದೂ ಬೇರೆ ಬೇರೆ ಭಾಷೆಗಳಿಗಾಗಿ ರೂಪುಗೊಳ್ಳಲು ಕಾರಣವಾದ ಪದ್ಧತಿಯನ್ನು ತಿರುವು ಮುರುವು ಮಾಡಿದರೆ ಅವೆರಡನ್ನೂ ಒಂದಾಗಿ ಎರಕ ಹೊಯ್ಯಬಹುದು. ಹತ್ತು ಶಬ್ದಗಳ ಒಂದು ವಾಕ್ಯದಲ್ಲಿ ಐದು ಶಬ್ದಗಳನ್ನು ಕಂಸಿನಲ್ಲಿ ಹಾಕಿ ಅವುಗಳ ಹಿಂದೀ ಅಥವಾ ಉರ್ದೂ ಪರ್ಯಾಯ ಪದವನ್ನು ಸೂಚಿಸಬೇಕಾಗಿ ಬಂದರೆ ಅಂಥ ಭಾಷೆಯನ್ನು ಓದುವದು ಸುಲಭವಲ್ಲ. ಇದಕ್ಕೆ ಎಲ್ಲಕ್ಕಿಂತ ಒಳ್ಳೆ ಉಪಾಯವೆಂದರೆ, ಪರ್ಶಿಯನ್ ಲಿಪಿಯಲ್ಲಿ ಪ್ರಕಟಿಸಲ್ಪಡುವ ಸಾಹಿತ್ಯದಲ್ಲಿ ಸರಳ ಉರ್ದುವನ್ನು ಬಳಸಿ ಅದರಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿರುವ ಹಿಂದೀ ಶಬ್ದಗಳನ್ನು ಸೇರಿಸುವದು. ಮತ್ತು ಉರ್ದು ಮತ್ತು ನಾಗರಿ ಲಿಪಿಯಲ್ಲಿ ಪ್ರಕಟವಾಗುವ ಸಾಹಿತ್ಯದಲ್ಲಿ ಸರಳ ಹಿಂದಿಯನ್ನುಪಯೋಗಿಸಿ ಅದರಲ್ಲಿ ಸಾಧಾರಣ ವಾಡಿಕೆಯಲ್ಲಿರುವ ಉರ್ದು ಶಬ್ದಗಳನ್ನು ಸೇರಿಸುವದು.

ಹಿಂದಿಯನ್ನೂ ಉರ್ದುವನ್ನೂ ಹಿಸುಕಿ ಹಿಂಡಿಸಿ, ಅವುಗಳನ್ನು ಒತ್ತಾಯದಿಂದ ಎರಕ ಹೊಯ್ದರೆ ಒಂದು ಬಗೆಯ ಭಾಷೆಯನ್ನು ರೂಪಿಸುವದು ಸಾಧ್ಯವಿದೆ. ಆದರೆ ಅಂಥ ಭಾಷೆಯನ್ನೋದುವ ಸ್ವೈರಣೆಯಿರುವವರನ್ನು ದೊರಕಿಸುವದು ಕಠಿನವಾದೀತು. ಹಿಸುಕುವದರಿಂದ ಮುನ್ನಡೆ ಬಿರುಸಾಗುವದು. ಒತ್ತಡವನ್ನು ಕಡಿಮೆಮಾಡಿ ಸರಳ, ನಿರುಪದ್ರವ ತಂತ್ರವನ್ನು ಪ್ರಯೋಗಿಸಿದರೆ ಎರಡರಲ್ಲಿಯೂ ಇರುವ ಒಳ್ಳೆಯ ಸತ್ವಗಳನ್ನು ಕೂಡಿಸಿಕೊಳ್ಳಬಹುದು. ಎರಡೂ ಭಾಷಾಭೇದಗಳನ್ನು ಅವುಗಳ ಪಾಡಿಗೆ ಬಿಟ್ಟು ಎರಕವೊಂದು ಸಿದ್ಧವಾಗುವವರೆಗೆ ದುಡಿಯುತ್ತಾ ಹೋಗಬೇಕು. ಜನರು ಇಷ್ಟೊಂದು ಮಾಡಬಲ್ಲರೆ, ಉಳಿದುದನ್ನು ಕಾಲದ ಹಾಗು ನಿಸರ್ಗದ ಕೈಯಲ್ಲಿ ಬಿಡಬಹುದು.

ಹಿಂದೀ ಉರ್ದುಗಳೆರಡೂ ಮಾತೃಭಾಷೆಗಳಲ್ಲದವರು ಎರಡೂ ಲಿಪಿಗಳನ್ನು ಕಲಿಯಬೇಕಾಗುವದು.

(ಹಿಂದುಸ್ತಾನಿಯಿಂದ)

ಕಾಕಾ ಕಾಲೇಲಕರ

# ಹಿಂದೀ ಹಳ್ಳಿ ಬರಗಾಲವನ್ನು ಎಂತು ಎದುರಿಸುತಿದೆ ?

( ೯ನೇ ಪುಟದಿಂದ )

ಅವರಿನ್ನೂ ತೀರ ಕಡಮೆ ಸೀದಾದಲ್ಲಿ ಉಪಜೀವನ ಸಾಗಿಸುತಿರುವರು. ಅವರಿಗೆ ಅಕ್ಕಿಯ ಕೊರತೆ ಇದೆ. 'ಮೈಸೂರಿನಲ್ಲಿಯೂ ಹೆಚ್ಚು ಅಕ್ಕಿ ಕಳಿಸಿರಿ' ಎಂಬ ಕೂಗು ಕೇಳಬರುತಿದೆ. ದಕ್ಷಿಣ ಹಿಂದುಸ್ತಾನದಲ್ಲಿಯ ಅಕ್ಕಿ ೧೯೪೭ ಜಾನೇವಾರಿ ಫೆಬ್ರುವರಿ ವರೆಗೆ ಪೇಟೆಗೆ ಬರುವಂತಿಲ್ಲ. ಬ್ರಹ್ಮದೇಶ, ಸಯಾಮ, ಜಾವಾ ಮೊದಲಾದ ಸಮುದ್ರದಾಚೆ ಪ್ರದೇಶದಿಂದ ಯಾವಾಗಾದರೊಮ್ಮೆ ಅಕ್ಕಿ ತುಂಬಿದ ಹಡಗಗಳು ಬರುತಿವೆ.

ಅಸಾಮ, ಓಡಿಸಾ ಇಲ್ಲವೆ ಉತ್ತರ ಹಿಂದುಸ್ತಾನದ ಹಲವು ಕಡೆಗಳಿಂದಲೂ ಅಕ್ಕಿ ಬರುತಿದೆ. ಅನಿಶ್ಚಿತವಾಗಿ ಬರುವ ಅಕ್ಕಿಯ ಆ ಹೊಳೆಯನ್ನು ಹಾಗೆಯೆ ಸಾಗಿಸಿ ಅಮೇರಿಕೆಯಿಂದ ಗೋದಿಯನ್ನು ಸಾಕಷ್ಟು ಪ್ರಮಾಣದಲ್ಲಿ ಕೊಟ್ಟು ಈ ಜನರನ್ನು 'ಜೀವಂತ ಇಡಲಾಗುವದೋ ? ನಮಗೇನು ಈ ಬಗ್ಗೆ ತಿಳಿಯದು. ದಕ್ಷಿಣ ಹಿಂದುಸ್ತಾನದ ಬಗ್ಗೆ ಈ ರೀತಿ ಅನಿಶ್ಚಿತತೆ ಇರುವಾಗ ಬಂಗಾಲದ ಪ್ರಶ್ನೆಯೂ ಗಡುಚಾಗಿದೆ. ದಕ್ಷಿಣ ಹಿಂದುಸ್ತಾನದಲ್ಲಿ ಮಕ್ಕಳಿಗೆ ಹಾಲು ಮತ್ತು ಉಳಿದ ಪೌಷ್ಟಿಕ ಪದಾರ್ಥಗಳನ್ನು ಹಂಚುತಿರುವದರಿಂದ ಬರಗಾಲದ ಭೀತಿ ಇಲ್ಲ. ಕಳೆದವಾರ ನಾನು ತ್ರಾವಣಕೋರದಲ್ಲಿ ಅನೇಕ ಮಕ್ಕಳು ಹಾಲು ಚೀಪುತಿರುವದನ್ನು ನೋಡಿದೆ. ಹೆಚ್ಚು ಹಾಲಿಗಾಗಿ ಅವರು ತಿರುತಿರುಗಿ ಬರುವದನ್ನೂ ನಾನು ಕಂಡೆ. ಆದರೂ "ಅಕ್ಕಿ ಗೋದಿ, ಗೋದಿ ಅಕ್ಕಿ" ಎಂಬ ಕೂಗು ಇನ್ನೂ ಇದ್ದೇ ಇದೆ. ದೂರ ಪ್ರದೇಶಗಳಲ್ಲಿರುವ ಜನರಿಗೆ ಎಂದೂ ನೋಡದ, ದೂರದ ತಮ್ಮ ಬಂಧುಗಳಿಗಾಗಿ ಆಹಾರ ಪದಾರ್ಥಗಳನ್ನು ಕಳಿಸಲು ಅಪ್ಪಣೆ ಕೊಡಲಾಗುತ್ತದೆ. ಅವರ ಹೃದಯ ಮತ್ತು ಮನಸ್ಸನ್ನು ಇಂತು ಮಾರ್ಪಡಿಸುತಿರುವ ಪರಮಾತ್ಮನಿಗೆ ಅನಂತ ಧನ್ಯವಾದಗಳು.

ಚಿತ್ರದುರ್ಗ ಮೊರೀಸ ಅಲೆಕ್ಸಾಂಡರ

ಸಪ್ಟೆಂಬರ ೧೯೪೬

ಆಭಾರಮನ್ನಣೆಯ ಈ ನಿಬಂಧಕ್ಕೆ ಸ್ವಾವಲಂಬಿಗಳಿಗೆ ದೇವರು ಸಹಾಯ ಮಾಡುವನು. ಎಂದಿಷ್ಟೇ ನಾನು ಜೋಡಿಸಬಯಸುತ್ತೇನೆ. ಹೆಚ್ಚು ಆಹಾರ ಪದಾರ್ಥಗಳನ್ನು ತಮ್ಮ ಸಲುವಾಗಿ ಬೆಳೆಯಬೇಕೆಂದು ಹಳ್ಳಿಗರಿಗೆ ಕಲಿಸತಕ್ಕದ್ದು. ಅಂದರೆ ಹೊರಗಿನಿಂದ ಸಹಾಯ ಬರುವದು ಮತ್ತು ಅದನ್ನು ಸ್ವಾಗತಿಸಲಾಗುವದು.

ಕಲಕತ್ತೆಯ ಗಾಡಿಯಲ್ಲಿ ಮೋ. ಕ. ಗಾಂಧಿ

೨೯—೧೦—೧೯೪೬

# ಗಲಭೆಗಳ ಬಗ್ಗೆ ಜವಾಹರರ ಹೇಳಿಕೆ

ನಡುಗಾಲ ಸರಕಾರದ ಉಪಾಧ್ಯಕ್ಷರಾದ ಪಂಡಿತ ಜವಾಹರಲಾಲರು ಕೇಂದ್ರ ಶಾಸನ ಸಭೆಯಲ್ಲಿ ೧೫ ನೇ ತಾರೀಕು ಕೇಂದ್ರ ಶಾಸನ ಸಭೆಯಲ್ಲಿ ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತ ಹೀಗೆ ಹೇಳಿದರು. "ಪೂರ್ವ ಬಂಗಾಲದಲ್ಲಿ ಒತ್ತಾಯದಿಂದ ಅಪಹರಿಸಿ ಧರ್ಮಾಂತರಗೊಳಿಸಲಾಗಿದೆ. ಈ ಸ್ತ್ರೀಯರನ್ನು ಅವರ ಮನೆಯವರಿಗೆ ಒಪ್ಪಿಸುವದು ಅತ್ಯಂತ ಅವಶ್ಯವಾಗಿದೆ. ಇದರ ಪ್ರತಿಕ್ರಿಯೆ ಅಖಿಲ ಹಿಂದುಸ್ತಾನದ ಮೇಲೆ ಆಗುತ್ತಿರುವದರಿಂದ ಇದು ಹೆಚ್ಚು ಮಹತ್ವದ್ದಾಗಿದೆ. ಅದುದರಿಂದ ಈ ಬಗ್ಗೆ ಶಕ್ಯವಿದ್ದ ಎಲ್ಲ ಪ್ರಯತ್ನ ಕೂಡಲೆ ಮಾಡಬೇಕಾಗಿದೆ. ಈ ಕೆಲಸವಾಗದೆ ಜನತ ವಿಶ್ವಾಸ ಗಳಿಸುವದು ಸಾಧ್ಯವಿಲ್ಲ. ಪ್ರಾಂತಿಕ ಸರಕಾರಗಳೂ ಶಾಂತಿಗಾಗಿ ಪ್ರಯತ್ನಿಸಬೇಕು. ಪ್ರತಿಯೊಬ್ಬ ಭಾರತೀಯನೂ ಇದರಲ್ಲಿ ಸಹಾಯ ಮಾಡಬೇಕು."



# ಸಂರಕ್ಷಣೆಗಾಗಿ ಸಂಘಟಿತರಾಗಿರಿ

## ಪರಿಸ್ಥಿತಿ ಕೈಮೀರುವ ಮೊದಲೆ ಎಚ್ಚರಾಗಿರಿ

### ಹಿಂದುಸ್ತಾನದ ಜನತೆಗೆ ಡಾ. ಹರ್ಡೀಕರರ ಬಿನ್ನಹ

ಹಿಂದುಸ್ತಾನೀ ಸೇವಾದಲದ ಸಲಹೆಗಾರರಾದ ಡಾ. ಎನ್. ಎಸ್. ಹರ್ಡೀಕರರು ಪುಂಡಾಟಿಕೆಯನ್ನು ತಡೆಯಬೇಕಾದರೆ ಸಂಘಟನೆಯ ಅವಶ್ಯಕತೆ ಇದೆಂದು ಹೇಳಿ ಪ್ರಕಟನೆಯೊಂದನ್ನು ಹೊರಡಿಸಿದ್ದಾರೆ. ಅದರ ಮುಖ್ಯಾಶಯ ವಿಂತಿದೆ.

ಕಲಕತ್ತೆಯಲ್ಲಿ ಪ್ರಾರಂಭವಾದ ಮಾನವ ಕೊಲೆಯ ಬೇಗೆಯು ಇಂದು ದೇಶದ ನಾನಾ ಭಾಗಗಳಲ್ಲಿ ಹಬ್ಬುತ್ತ ಸಾಗಿದೆ. ಇದರ ಪರಿಣಾಮದಿಂದ ಸಹಸ್ರಾವಧಿ ಜನರು ತಮ್ಮ ಪ್ರಾಣಕ್ಕೆ ರವಾದರು. ಕೋಟ್ಯವಧಿ ರೂಪಾಯಿಗಳ ಆಸ್ತಿ-ವಿತ್ತಗಳ ನಾಶವಾಯಿತು. ಮನೆ, ಮಠ, ಮಸೀದೆಗಳು ನೆಲಸಮವಾದವು. ಅಥವಾ ಸುಟ್ಟು ಭಸ್ಮವಾದವು. ಈ ತರಹದ ಅಮಾನುಷ ಕೃತಿಗಳು ಇನ್ನೂ ಇಂದಿಗೂ ಅವ್ಯಾಹತವಾಗಿ ನಡೆಯುತ್ತಿವೆ.

ಹಿಂದುಸ್ತಾನದಲ್ಲಿ ಅಜ್ಞರ ಜನಸಂಖ್ಯೆಯೇ ಹೆಚ್ಚು. ಜನತೆಯ ಈ ಅಜ್ಞಾನದ ಲಾಭವನ್ನು ಅಲ್ಲಲ್ಲಿಯ ಧೂರ್ತರು ತೆಗೆದುಕೊಂಡು ಒಂದು ಜಾತಿಯ ವಿರುದ್ಧ ಸುಳ್ಳೊಂದು ಸೊಟ್ಟೊಂದು ಹೇಳಿ, ಅಪಪ್ರಚಾರಮಾಡಿ ಇನ್ನೊಂದು ಜಾತಿಯುವರನ್ನು ಬಡಿದೆಬ್ಬಿಸಿ ಅವರವರನ್ನು ಹೊಡೆದಾಡಲಿಕ್ಕೂ ಬಡೆದಾಡಲಿಕ್ಕೂ ಹಚ್ಚುತ್ತಿರುವರು. ಈಗ ಅಲ್ಲಲ್ಲಿ ನಡೆಯುತ್ತಿರುವ ಘಟನೆ ಇವೆಲ್ಲವೂ ನಡೆಯುತ್ತಿರುವದು ಜಾತಿಯ, ಧರ್ಮದ ಮತ್ತು ದೇವರ ಹೆಸರಿನಲ್ಲಿ!

ಇಂಥ ಅಶಾಂತ ಪರಿಸ್ಥಿತಿಯುಂಟಾದಾಗ ಚಿತ್ತಸ್ವಾಸ್ಥ್ಯವು ನಷ್ಟವಾಗುವದು; ಸಾರಾಸಾರ ವಿಚಾರ ಬುದ್ಧಿಯು ಇಲ್ಲದಂತಾಗುವದು; ಪ್ರಸಂಗಾವಧಾನವು ಮಾಯವಾಗುವದು. ಮತ್ತು ಮನುಷ್ಯನು ಕ್ರೋಧಾಂಧನಾಗಿ ಅರಿವುಗೆಟ್ಟು ಅತ್ಯಾಚಾರವನ್ನಾರಂಭಿಸುವನು. ಇದರಿಂದ ಗಲಭೆಗಾರರಿಗೆ ಪ್ರತೀಕಾರವಿಲ್ಲದಂತಾಗಿ ಅವರು ತಮ್ಮ ಆಸ್ತಿ, ವಿತ್ತ, ಪ್ರಾಣವಿನಾಶಕ ಚಟುವಟಿಕೆಗಳನ್ನು ಅನಿರ್ಬಂಧವಾಗಿ ಸಾಗಿಸುವರು. ಅದರ ಪರಿಣಾಮವಾಗಿ ಸಮಾಜಕ್ಕೆ ಎಣಿಕೆ ಇಲ್ಲದಷ್ಟು ಹಾನಿಯಾಗುವದು.

ಇಂದಿನ ವರೆಗೆ ದೇಶದ ನಾನಾ ಭಾಗಗಳಲ್ಲಿ ನಡೆದ ಘಟನೆಗಳತ್ತ ನೋಡಿದರೆ ನಾವು ಕೇವಲ ಪೋಲೀಸರನ್ನಾಗಲಿ ಸೈನಿಕರನ್ನಾಗಲೀ ನಂಬಿಕೊಂಡು ಕುಳಿತರೆ ಸಾಲದು. ಅದಕ್ಕೆ ಜನತೆಯೂ ಸಂಘಟಿತವಾಗಬೇಕು. ಸಂಘಟನೆಯು ಮನಸ್ಸು ಮಾಡಿದಾಕ್ಷಣವೇ ಉಂಟಾಗಲಾರದು. ಅದಕ್ಕೆ ಪೂರ್ವಸಿದ್ಧತೆ ಬೇಕು. ಮಾನಸಿಕ ಸಿದ್ಧತೆಯೂ ಬೇಕು. ಪರಿಸ್ಥಿತಿಯು ಹೇಳಿ ಕೇಳಿ ಬರುವದಿಲ್ಲ. ಕೇಡಿಗಳು ದಿನವನ್ನು ಗೊತ್ತುಪಡಿಸಿ ಗಲಭೆಯನ್ನಾರಂಭಿಸುವದಿಲ್ಲ. ಗಲಭೆಯು ಒಮ್ಮೆ ಪ್ರಾರಂಭವಾದರೆ ಅನಂತರ ಉದ್ಭೂತವಾಗುವ ಪರಿಸ್ಥಿತಿಯಲ್ಲಿ ಸಂಘಟನೆ ಮಾಡುವದಂತೂ ತೀರ ಅಸಾಧ್ಯ ಮಾತು. ಅದುದರಿಂದ ಶಾಂತ ವಾತಾವರಣದಲ್ಲಿ ಶಾಂತತೆಯನ್ನು ಕಾಯುವದಕ್ಕೂ ಅಶಾಂತ ವಾತಾವರಣದಲ್ಲಿ ಶಾಂತತೆಯನ್ನು ಪ್ರಸ್ಥಾಪಿಸುವದಕ್ಕೂ ಪ್ರತಿಯೊಂದು ಹಳ್ಳಿ ಪಟ್ಟಣದಲ್ಲಿ ಒಂದೊಂದು ತಂಡವು ನಿರ್ಮಾಣವಾಗುವದು ಅತ್ಯವಶ್ಯವಿದೆ. ಇಷ್ಟೇ ಅಲ್ಲದೆ ಪ್ರತಿಯೊಬ್ಬರು ಬರಬಹುದಾದ ಪರಿಸ್ಥಿತಿಯನ್ನು ಪರಿಣಾಮಕಾರಿಯಾಗುವಂತೆ ಎದುರಿಸುವ ಸಿದ್ಧತೆ ಮಾಡಿಕೊಳ್ಳುವುದೂ ಅಷ್ಟೇ ಅಗತ್ಯದ ವಿಷಯವಾಗಿದೆ.

ತಮ್ಮ ಉದ್ದೇಶಸಾಧನೆಗಾಗಿ ಈಗ ದೇಶದಲ್ಲಿ ಅನೇಕರು ಅನೇಕ ತರಹದ ಪ್ರಚಾರ ನಡೆಸಿ ಅಜ್ಞಜನರನ್ನು ಹುರಿದುಂಬಿಸಿ ಅವರಿಂದ ಅನನ್ವಿತ ಕೃತಿಗಳನ್ನು ಮಾಡಿಸುತ್ತಿರುವದಕ್ಕೆ ನೌಖಾಲಿ, ತಿಪ್ಪೇರಾ, ಢಾಕಾ, ಮುಂಬಯಿ ಮೊದಲಾದ ಸ್ಥಳಗಳಲ್ಲಿಯ ಘಟನೆಗಳು ಪ್ರತ್ಯಕ್ಷ ಸಾಕ್ಷಿಗಳಾಗಿವೆ.

"ಬಂಗಾಲದಲ್ಲಿ ಆ ತರಹದ ಘಟನೆಗಳಾದವೆಂದು ಅವರು ಸಂಘಟಿತರಾಗಲಿ, ನಮಗೇಕೆ?" ಎಂದು ಕೇಳುವದು ಮೂರ್ಖತನದ ಮಾತು. ಇಂದು ಬಂಗಾಲದಲ್ಲಿ ಆದದ್ದು ನಾವು ಎಚ್ಚರದಿಂದ ನಡೆಯದಿದ್ದರೆ ನಾಳೆ ಇಲ್ಲಿಯೂ ಆಗಲಾರದೆಂದು ಹೇಳುವವರಾರು? ಮೇಲಾಗಿ ನಾವು ಸಂಘಟನೆ ಮಾಡಿಕೊಳ್ಳುವದು ನಮ್ಮ ಆತ್ಮರಕ್ಷಣೆಗಾಗಿ ನಮ್ಮ ಕುಟುಂಬ, ಆಸ್ತಿಪಾಸ್ತಿಗಳ ರಕ್ಷಣೆಗಾಗಿ, ನಮಗೆ ಪರಾಟಿಕೆ ಬೇಕಿಲ್ಲ. ಯಾರ ಮೇಲೂ ನಾವು ಏರಿ ಹೋಗಬೇಕಾಗಿಲ್ಲ. ನೌಖಾಲಿಯಲ್ಲಿಯಂತೆ ಯಾರ ಮೇಲೂ ಏರಿ ಹೋಗಿ ಕೊಲೆ, ಸುಲಿಗೆ, ಧರ್ಮಾಂತರಗಳನ್ನು ಮಾಡುವದು ನಮ್ಮ ಮನದಲ್ಲಿ ಇಲ್ಲ. ಕೇವಲ ನಮ್ಮ, ನಮ್ಮ ಕುಟುಂಬದ, ನಮ್ಮ ಓಣಿ ಕೇರಿಯ, ನಮ್ಮ ನಗರದ ರಕ್ಷಣೆಗಾಗಿ ನಾವು ಸುಸಂಘಟಿತರಾಗಬೇಕಾಗಿದೆ. ಪ್ರಸಂಗ ಬಂದಲ್ಲಿ ನಮ್ಮ ಪ್ರಾಣವನ್ನೂ ಕೊಟ್ಟು ನೆಮ್ಮದಿಯನ್ನುಂಟು ಮಾಡುವದು ನಮ್ಮ ಕರ್ತವ್ಯವಾಗಿದೆ. ಅದುದರಿಂದ ಕರ್ನಾಟಕದ ಎಲ್ಲ ತರುಣರೂ ಯಾವದೆ ಒಳಜಾತಿ, ಪಕ್ಷಪಂಗಡಗಳನ್ನೂ ರಾಜಕೀಯ ಭಿನ್ನಾಭಿಪ್ರಾಯಗಳನ್ನೂ ಮುಂದೆ ತರದೆ ಕೂಡಲೆ ಸುಸಂಘಟಿತರಾಗುವದು ಶ್ರೇಯಸ್ಕರ. ಪಕ್ಷಪಂಗಡಗಳ ಹೆಸರಿನಲ್ಲಿ, ತತ್ವದ ಮರೆಯಲ್ಲಿ, ರಾಷ್ಟ್ರೀಯತೆಯ ಸೋಗಿನಲ್ಲಿ, ವರ್ಗಕಲಹ, ಜಾತಿ ವೈಷಮ್ಯ, ವ್ಯಕ್ತಿ ದ್ವೇಷದ ವಿಷಾಣುಗಳನ್ನು ಹರಡುತ್ತಿರುವ ನಮ್ಮಲ್ಲಿಯ ಹಲಕೆಲವು ವ್ಯಕ್ತಿಗಳು ಈಗಲಾದರೂ ಕಣ್ದೆರೆದು ಸುತ್ತಲೂ ನೋಡಿ ವಿನಾಶಕ್ಕೆ ಮೂಲವಾದ ತಮ್ಮ ಚಟುವಟಿಕೆಗಳನ್ನು ಕೂಡಲೆ ನಿಲ್ಲಿಸುವದೂ ಒಂದು ಬಗೆಯ ಸೇವೆಯಾಗಿದೆ. ಒಂದೊಮ್ಮೆ ಆ ವ್ಯಕ್ತಿಗಳು ಹಾಗೆ ಸುಮ್ಮನಾಗದಿದ್ದರೆ ಅಜ್ಞ ಜನತೆಯಲ್ಲಿ ಅಪಪ್ರಚಾರವಾಗಿ ಅದರಿಂದ ಹೆಚ್ಚಿನ ಒಡಕು ದ್ವೇಷಾಸೂಯೆಗಳು ಬೆಳೆಯದಂತೆ ನೋಡಿಕೊಳ್ಳುವದಕ್ಕಾಗಿ ಸಮಾಜ ಸ್ವಾಸ್ಥ್ಯ ಕಾಯಬೇಕೆನ್ನುವ ವಿಚಾರವಂತ ಜನತೆಯು ಈಗಲಾದರೂ ಮುಂದೆ ಬರಲಿ. ಇಲ್ಲದೆ ಹೋದರೆ ಬೆಂಕಿ ಹತ್ತಿದನಂತರ ಬಾವಿ ತೋಡ ಹೊರಟಂತಾದೀತು. ಜಾಗ್ರತೆ !

# ಅಂತರ್ ರಾಷ್ಟ್ರೀಯ

(೫ ನೇ ಪುಟದಿಂದ ಬಂದುದು)

ಪಾಲಿಸ್ತಾನದಲ್ಲಿ ಸೆರೆಹಿಡಿಯಲ್ಪಟ್ಟ ಯಹೂದ್ಯರನ್ನು ಬಿಡುಗಡೆಮಾಡಿ ಹೊಸತಾಗಿ ಮಾತುಕತೆ ಆರಂಭಿಸುವದಾಗಿ ಬ್ರಿಟಿಶ ಸರಕಾರ ಸಾರಿದ್ದರೂ ಅಲ್ಲಿಯ ಯಹೂದ್ಯರ ಭಯೋತ್ಪಾದಕ ಚಳವಳಿ ಇನ್ನೂ ಆರಿಲ್ಲ. ಮೊನ್ನೆ ಮೊನ್ನೆ ಅವರು ದೊಡ್ಡ ರೇಲ್ವೆ ನಿಲ್ದಾಣವನ್ನು ಹಾರಿಸಿದ್ದಲ್ಲದೆ ಒಂದು ಪೋಲೀಸ ಸ್ಟೇಶನ್ನನ್ನು ಧ್ವಂಸಮಾಡಿ ಅನೇಕ ಬ್ರಿಟಿಶ ಪೋಲೀಸರ ಮರಣಕ್ಕೆ ಕಾರಣರಾದರು. ಈಗ ಅವರು ಇನ್ನಷ್ಟು ಮುಂದೊತ್ತಿ ಬ್ರಿಟಿಶರ ಮನೆ ಬಾಗಿಲಿಗೇ ತಮ್ಮ ಹೋರಾಟವನ್ನು ತಂದಿಳಿಸಿದ್ದಾರೆ. ಬ್ರಿಟಿಶರ ಪಾಲಿಸ್ತಾನ ಧೋರಣೆ ಬದಲಾಗದಿದ್ದರೆ ಫೀಲ್ಡಮಾರ್ಶಲ ಮಾಂಟಗೊಮರಿಯವರನ್ನೇ ಕೊಲೆ ಮಾಡುವದಾಗಿ ಬೆದರಿಕೆ ಹಾಕಿದ್ದಾರೆ. ಇದರಿಂದ ಬ್ರಿಟಿಶ ಮಂತ್ರಿ ಪ್ರಮುಖರ ಮನೆಯನ್ನೂ ಮೈಯನ್ನೂ ಕಾಯಲು ಬಲವಾದ ಕಾವಲಿಡಬೇಕಾಗಿ ಬಂದಿದೆ.

* * * *

ಚೀನದ ದಂಡನಾಯಕ ಚಿಯಾಂಗ ಕೈ ಶೇಕರು ತಮ್ಮ ಸೈನಿಕರಿಗೆ ಒಂದು ಆಜ್ಞಾಪತ್ರದ ಮೂಲಕ ತಾ. ೧೧ಕ್ಕೆ ಎಲ್ಲೆಡೆಗಳಲ್ಲಿಯೂ ಕಮ್ಯುನಿಸ್ಟರ ವಿರುದ್ಧ ಯುದ್ಧವನ್ನು ನಿಲ್ಲಿಸಿ ನಿಂತಲ್ಲೇ ಉಳಿಯಬೇಕೆಂದು ತಿಳಿಸಿದ್ದಾರೆ. ಸದ್ಯವೇ ಕೂಡಲಿರುವ ರಾಷ್ಟ್ರೀಯ ಪರಿಷತ್ತಿನಲ್ಲಿ ಕಮ್ಯುನಿಷ್ಟರೂ ಇತರ ರಾಜಕೀಯ ಪಕ್ಷಗಳೂ ಭಾಗವಹಿಸಲು ಅನುವಾಗಲೆಂದು ಹೀಗೆ ಮಾಡಲಾಗಿದೆ.

# ಪಂಡಿತ ಮಾಲವಿಯವರು ಸ್ವರ್ಗಸ್ಥರಾದರು

## ಪೌರ್ವಾತ್ಯ ಪಾಶ್ಚಾತ್ಯ ಸಂಸ್ಕೃತಿ ಸಮನ್ವಯದ ಅಧಿದೇವತೆ

### ರಾಷ್ಟ್ರಸೇವೆಯಲ್ಲಿಯೆ ದೇಹಸವಿಸಿದವರು

ಪಂಡಿತ ಮದನಮೋಹನ ಮಾಲವಿಯವರು ೧೨—೧೧—೧೯೪೬ ನೆಯ ದಿನ ಸಾಯಂಕಾಲ ೪-೧೧ಗಂಟೆಗೆ ಬನಾರಸದಲ್ಲಿ ಹಿಂದೂ ವಿಶ್ವವಿದ್ಯಾನಿಲಯದಲ್ಲಿಯ ತಮ್ಮ ಮನೆಯಲ್ಲಿ ಸ್ವರ್ಗಸ್ಥರಾದರೆಂದು ತಿಳಿಸಲು ಅತ್ಯಂತ ವಿಷಾದವಾಗುತ್ತದೆ. ನೌಖಾಲಿ ಅತ್ಯಾಚಾರಗಳಿಂದ ಅತ್ಯಂತ ವ್ಯಥಿತಗೊಂಡು ಮಾಲವಿಯವರು ಹಾಸಿಗೆ ಹಿಡಿದವರು ಏಳಲೇ ಇಲ್ಲ. ೧೧ ನೇ ತಾರೀಕು ಮುಂಜಾವಿನಿಂದ ಅವರ ಪ್ರಜ್ಞೆ ತಪ್ಪಿಹೋಯ್ತು. ಬಾಯಲ್ಲಿ "ಹರೇರಾಮ ಹರೇರಾಮ" ಎಂಬ ಪರಮಾತ್ಮನ ನಾಮೋಚ್ಚಾರ ಮಾತ್ರ ಮೆಲುದನಿಯಲ್ಲಿ ನಡೆದಿದ್ದಿತು. ತುಟಿಗಳಷ್ಟೇ ಅಲುಗಾಡುತಿದ್ದವೆಂದು ಹೇಳಬಹುದು. ಅಂದು ಮುಂಜಾವಿನಿಂದಲೆ ಅವರ ಅಂತ್ಯದರ್ಶನಕ್ಕಾಗಿ ಜನರು ತಂಡತಂಡವಾಗಿ ಬಂದು ಹೋದರು. ೧೨ ನೇ ತಾರೀಕು ಮಧ್ಯಾಹ್ನ ೨ ಗಂಟೆಗೆ ಜ್ವರ ಒಮ್ಮೆಲೆ ೧೦೫ ಡಿಗ್ರಿವರೆಗೇರಿ ಉಸಿರಾಡಿಸುವದು ನಿಂತಿತು. ಕೊನೆಗೆ ೪—೧೦ ಗಂಟೆಗೆ ಅವರ ಪ್ರಾಣಪಕ್ಷಿಯು ಹಾರಿಹೋಯಿತು.

## ಉಜ್ವಲ ಜೀವನ

ಪಂಡಿತ ಮದನಮೋಹನ ಮಾಲವಿಯವರು ೧೮೬೧ ರಲ್ಲಿ ಅಲಹಾಬಾದಿನಲ್ಲಿ ಜನಿಸಿದರು. ಇವರ ಮನೆತನವು ಎಂದಿನಿಂದಲೂ ಸಂಸ್ಕೃತ ವಿದ್ಯೆಯಲ್ಲಿ ಪ್ರಸಿದ್ಧಿ ಪಡೆದಿತ್ತು. ಇವರ ತಂದೆ ಪಂಡಿತ ವ್ರಜನಾಥರು ಘನವಿದ್ವಾಂಸರಾಗಿದ್ದರು. ಮಾಲವಿಯವರ ಪ್ರಾಥಮಿಕ ಶಿಕ್ಷಣವು ಸರ್ವಜ್ಞಾನೋಪದೇಶಕ ಸಂಸ್ಕೃತ ಪಾಠಶಾಲೆಯಲ್ಲಿ ಮತ್ತು ಧರ್ಮವರ್ಧಿನಿ ಶಾಲೆಯಲ್ಲಿ ನಡೆದು ಮ್ಯೂರ ಕಾಲೇಜಿನಲ್ಲಿ ಪ್ರೌಢ ಶಿಕ್ಷಣವನ್ನು ಪಡೆದರು. ೧೮೮೪ ರಲ್ಲಿ ಇವರು ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಎಂ. ಎ. ಅಭ್ಯಾಸ ಮಾಡುತಿರುವಾಗಲೆ ಅನುಕೂಲತೆ ಇಲ್ಲದಂತಾಗಿ ಅವರು ಅಭ್ಯಾಸ ಬಿಟ್ಟು ಒಂದು ಹಾಯಸ್ಕೂಲಿನಲ್ಲಿ ಶಿಕ್ಷಕರಾದರು.

ಅವರು ೨೪ ವರ್ಷದವರಾದ ಕೂಡಲೆ ಹಿಂದುಸ್ತಾನವೆಂಬ ದೈನಿಕಪತ್ರದ ಸಂಪಾದಕರಾದರು. ಅಷ್ಟೊಂದು ಉಜ್ವಲವಾಗಿದ್ದಿತು ಅವರ ರಾಷ್ಟ್ರಸೇವೆಯ ಮಟ್ಟ. ೧೮೮೬ ರಲ್ಲಿ ಕಲಕತ್ತೆಯಲ್ಲಿ ಕೂಡಿದ್ದ ೨ ನೇ ಕಾಂಗ್ರೆಸ ಮಹಾಧಿವೇಶನಕ್ಕೆ ಹೋಗಿ ಉಜ್ವಲ ಭಾಷಣ ಮಾಡಿದರು. ಈ ಭಾಷಣದಿಂದ ಎಲ್ಲರನ್ನೂ ಮಾಲವಿಯವರು ತಮ್ಮೆಡೆ ಎಳಕೊಂಡರು. ಅವರು ಪತ್ರಿಕಾ ವ್ಯವಸಾಯ ಸಾಗಿಸುತಿರುವಾಗಲೆ ವಕೀಲಿ ಅಭ್ಯಾಸ ಮಾಡಿ ೧೮೯೧ ರಲ್ಲಿ ವಕೀಲಿಯಲ್ಲಿ ಪಾಸಾದರು. ವಕೀಲಿಯಲ್ಲಿಯೂ ಅವರು ಮುಂದೆ ಹೆಸರು ಸಂಪಾದಿಸಿದರು. ಆದರೆ ಚಿಕ್ಕಂದಿನಿಂದ ರಾಷ್ಟ್ರಸೇವೆಯ ಕಡೆಗೇ ಹೆಚ್ಚು ಒಲವಿದ್ದುದರಿಂದ ಅದರಲ್ಲಿಯೆ ತೊಡಗಿದರು. ೧೮೮೬ ರಲ್ಲಿ ಕಾಂಗ್ರೆಸ್ಸಿಗೆ ಹೋಗಹತ್ತಿದವರು ಮುಂದಿನ ಬಹುತರ ಎಲ್ಲ ಅಧಿವೇಶನಗಳಿಗೂ ಹೋಗಿ ಮಹತ್ವದ ಭಾಷಣ ಮಾಡುತಿದ್ದರಲ್ಲದೆ ವಿಚಾರವಿನಿಮಯ ಮಾಡುತಿದ್ದರು.

ವಂಗಭಂಗ ಚಳವಳಿಯ ಕಾಲಕ್ಕೆ ಇವರು ವಕೀಲಿಗೆ ಶರಣು ಹೊಡೆದು ಹಿಂದು ವಿದ್ಯಾಪೀಠ ಸ್ಥಾಪನೆಯ ಕಾರ್ಯ ಕೈಕೊಂಡರು. ೧೯೦೯ ರಲ್ಲಿ ಲಖನೌ ಕಾಂಗ್ರೆಸ್ಸಿನ-ಮತ್ತು ೧೯೧೮ ರ ದಿಲ್ಲಿ ಕಾಂಗ್ರೆಸ್ಸಿನ ಅಧ್ಯಕ್ಷಸ್ಥಾನವನ್ನಲಂಕರಿಸಿದರು. ೧೯೦೨ ರಿಂದ ೧೦ ರ ವರೆಗೆ ಪ್ರಾಂತಿಕ ಶಾಸನ ಸಭೆಯ ಸದಸ್ಯರು, ೧೯೧೦ ರಿಂದ ೧೯ ರ ವರೆಗೆ ವರಿಷ್ಠ ಶಾಸನ ಸಭೆಯ ಸದಸ್ಯರು ಆಗಿದ್ದರು. ರೌಲೆಟ ಕಾಯಿದೆಯ ನಿಷೇಧಾರ್ಥವಾಗಿ ಅವರು ರಾಜೀನಾಮೆ ಕೊಟ್ಟು ಶಾಸನಸಭೆಗಳಿಂದ ಹೊರಬಿದ್ದರು. ಶಾಸನಸಭೆಗಳಲ್ಲಿ ಸರಕಾರದ ಧೋರಣದ ಬಗ್ಗೆ ಇವರು ಮಾಡುತಿದ್ದ ಉಗ್ರಟೀಕೆ ಅವರ ದೇಶಪ್ರೇಮ, ಪಾಂಡಿತ್ಯದ ನಿದರ್ಶಕವಾಗಿದ್ದಿತು.

ಅಸಹಕಾರ ಚಳವಳಿಯಲ್ಲಿ ಪಂಡಿತರು ಅಷ್ಟೊಂದು ಆಸ್ಥೆ ವಹಿಸಲಿಲ್ಲ. ಮಾಂಟಫರ್ಡ ಸುಧಾರಣೆಗಳನ್ನು ಸ್ವೀಕರಿಸಬೇಕೆಂದು ಅವರ ಅಭಿಪ್ರಾಯವಿದ್ದಿತು. ಅಸಹಕಾರ ಚಳವಳಿ ಒಳ್ಳೇ ಜೋರಿನಿಂದ ನಡೆದಾಗ ಅವರು ಒಡಂಬಡಿಕೆಗಾಗಿ ಪ್ರಯತ್ನಿಸಿದರು. ಆದರೆ ಅದು ಸಾಧ್ಯವಾಗಲಿಲ್ಲ. ೧೯೨೬ ರಲ್ಲಿ ರಾಷ್ಟ್ರೀಯ ಪಕ್ಷವನ್ನು ಸ್ಥಾಪಿಸಿ ಚುನಾವಣೆಗಳನ್ನು ಹೋರಾಡಿದರು. ೧೯೨೮ ರಲ್ಲಿ ಸಾಯಮನ ಸಪ್ತಕದ ಬಹಿಷ್ಕಾರ ಚಳವಳಿಯಲ್ಲಿ ಅವರು ಕಾಂಗ್ರೆಸ ಧ್ವಜವನ್ನೆತ್ತಿ ಎಲ್ಲರಿಗಿಂತ ಅಗ್ರಭಾಗದಲ್ಲಿ ನಿಂತರು. ಸಂಪೂರ್ಣ ಸ್ವಾತಂತ್ರ್ಯದ ಘೋಷಣೆ ಮಾಡಿ ಕಾಂಗ್ರೆಸ್ಸು ಕಾರ್ಯೋನ್ಮುಖವಾದಾಗ ಪಂಡಿತರು ಚಳವಳಿಯಲ್ಲಿ ಧುಮುಕಿ ಎರಡು ಸಲ ಕಾರಾಗೃಹ ವಾಸವನ್ನನುಭವಿಸಿದರು.

ಎರಡನೆ ದುಂಡುಮೇಜಿನ ಪರಿಷತ್ತಿನ ಕಾಲಕ್ಕೆ ಪಂಡಿತ ಮಾಲವಿಯರು ರಾಷ್ಟ್ರಧರ್ಮವನ್ನೆತ್ತಿಹಿಡಿದು ಸಮುದ್ರಯಾನದ ನಿರ್ಬಂಧವನ್ನು ಹರಿದೊಗೆದು ಲಂಡನ್ನಿಗೆ ಹೋದರು. ಆಗ ಅವರು ತಮ್ಮ ಸಂಗಡ ಗಂಗೋದಕ ಮತ್ತು ಮೃತ್ತಿಕೆ ಒಯ್ದದ್ದು ಸರ್ವಶ್ರುತ. ದುಂಡುಮೇಜಿನ ಪರಿಷತ್ತಿನಲ್ಲಿ ಅವರು ಹಿಂದುಸ್ತಾನದ ಪರವಾಗಿ ಮಾಡಿದ ಕಾರ್ಯ ಹಿಂದುಸ್ತಾನದ ಸ್ವಾತಂತ್ರ್ಯದ ಇತಿಹಾಸದಲ್ಲಿ ಚಿರಸ್ಮರಣೀಯವಾಗುಳಿಯುವದು. ಇವರ ರಾಷ್ಟ್ರಸೇವೆ ಇಷ್ಟೊಂದು ಉಜ್ವಲವಾಗಿದ್ದುದರಿಂದಲೆ ರಾಷ್ಟ್ರವು ಇವರನ್ನು ೧೯೩೨ ರಲ್ಲಿ ದಿಲ್ಲಿಯಲ್ಲಿಯ ಅಕ್ರಮ ಕಾಂಗ್ರೆಸ ಅಧಿವೇಶನಕ್ಕೆ ಮತ್ತು ೧೯೩೩ ರ ಕಲಕತ್ತಾ ಕಾಂಗ್ರೆಸ್ಸಿಗೆ ಮತ್ತೆ ಅಧ್ಯಕ್ಷರನ್ನಾಗಿ ಆರಿಸಿತು. ಪುಣೆಯ ಒಪ್ಪಂದಕ್ಕೆ ಇವರೂ ಒಬ್ಬ ಪ್ರಮುಖ ಕಾರಣ ಪುರುಷರು. ಆದರೆ ಜಾತೀಯ ನಿರ್ಣಯದ ಸಂಬಂಧದಲ್ಲಿ ಕಾಂಗ್ರೆಸ್ಸು ಅನುಸರಿಸಿದ ಧೋರಣವು ಇವರಿಗೆ ಸಮ್ಮತವಾಗದ್ದರಿಂದ ಕಾಂಗ್ರೆಸ ಪಾರ್ಲಮೆಂಟರಿ ಬೋರ್ಡಿಗೆ ಇವರು ರಾಜೀನಾಮೆ ಕೊಟ್ಟರು. ಆದರೂ ಇವರು ಕೊನೆಯ ವರೆಗೆ ಕಾಂಗ್ರೆಸ್ಸಿನ ಏಕನಿಷ್ಠ ಸದಸ್ಯರಾಗಿದ್ದರು.

ಬನಾರಸ ಹಿಂದು ವಿಶ್ವವಿದ್ಯಾಲಯವು ಮಾಲವಿಯವರ ಕೀರ್ತಿಧ್ವಜವಾಗಿ ಕಂಗೊಳಿಸುತ್ತದೆ. ೧೯೧೯ ರಿಂದ ೧೯೩೮ ರ ವರೆಗೆ ಇವರು ಆ ವಿಶ್ವವಿದ್ಯಾಲಯದ ವಾಯಿಸ ಚಾನ್ಸಲರರೂ ೧೯೩೯ ರಿಂದ ಈ ವರೆಗೆ ಅದರ ರೆಕ್ಟರರೂ ಆಗಿದ್ದರು. ಹಿಂದುಸ್ತಾನದಲ್ಲಿ ಅಷ್ಟೇ ಏಕೆ ಇಡೀ ಜಗತ್ತಿನಲ್ಲಿ ಹಿಂದೂ ವಿಶ್ವವಿದ್ಯಾಲಯವನ್ನು ಒಂದು ಆದರ್ಶ ವಿದ್ಯಾಪೀಠವನ್ನಾಗಿ ಮಾರ್ಪಡಿಸಬೇಕೆಂದು ಅವರು ಬಹಳ ಮಟ್ಟಿಗೆ ಪರಿಶ್ರಮಪಟ್ಟರು. ಲಕ್ಷಗಟ್ಲೆ ರೂಪಾಯಿಗಳನ್ನು ವಿಶ್ವವಿದ್ಯಾಲಯಕ್ಕೆ ಪಡೆದರು. ಕೇವಲ ಬೌದ್ಧಿಕ ಶಿಕ್ಷಣ ಸಾಲದೆಂದು ಮಾಲವಿಯವರು ಎಂಜನಿಯರಿಂಗ, ಆಯುರ್ವೇದ, ಔದ್ಯೋಗಿಕ ಮೊದಲಾದ ಬಗೆಬಗೆಯ ವಿಷಯಗಳನ್ನು ತಮ್ಮ ಅಭ್ಯಾಸ ಕ್ರಮದಲ್ಲಿ ಸೇರಿಸಿಕೊಂಡು ಅವನ್ನು ಯಶಸ್ವಿ ಮಾಡುವಲ್ಲಿ ಬಹಳ ಪರಿಶ್ರಮಬಟ್ಟರು. ಹಿಂದುಸ್ತಾನದ ಎಲ್ಲ ಭಾಗಗಳಿಂದ ವಿದ್ಯಾರ್ಥಿಗಳು ಬನಾರಸ ಹಿಂದೂ ವಿಶ್ವವಿದ್ಯಾಲಯಕ್ಕೆ ಹೋಗುತಿರುವವೊಂದೇ ಮಾತಿನಿಂದ ಅದರ ಲೋಕಪ್ರಿಯತೆ ಸ್ಪಷ್ಟವಾಗುತ್ತದೆ. ಇಂಥ ಆದರ್ಶ ರಾಷ್ಟ್ರಪುರುಷರು ಇಂದು ಇಂಥ ಸಂಕ್ರಮಣ ಕಾಲದಲ್ಲಿ ಇಹಲೋಕ ಯಾತ್ರೆ ಮುಗಿಸಿದ್ದು ಅತ್ಯಂತ ವಿಷಾದಕರವಾಗಿದೆ. ಪರಮಾತ್ಮನು ಮೃತರ ಆತ್ಮಕ್ಕೆ ಚಿರಶಾಂತಿಯನ್ನೀಯಲಿ.

## ಅಲ್ಲಲ್ಲಿಯ ಸುದ್ದಿಗಳು

ಬೆಂಗಳೂರಿನಲ್ಲಿ ೧೯೪೫ ರ ಆಗಸ್ಟ ತಿಂಗಳಿನಲ್ಲಿ ಶ್ರೀ ಫಾಲ್ಗುಣ ಮಹಾರಾಜರು ನಡೆಸಿದ ಅತಿರುದ್ರ ಮಹಾಯಾಗದ ಋತ್ವಿಜರಿಗೆಲ್ಲ ಸಂಭಾವನೆ ಕೊಡಲಾಗುವದು. ಈ ಸಂಭಾವನೆಯನ್ನು ಬೆಂಗಳೂರು ಚಾಮರಾಜೇಂದ್ರ ವೇದ ಮಹಾ ಪಾಠಶಾಲೆಯಲ್ಲಿ ಸ್ವತ: ಬಂದು ತೆಗೆದುಕೊಳ್ಳಬಹುದು. ಪರಸ್ಥಳದವರು ತಮ್ಮ ವಿಳಾಸ ತಿಳಿಸಿದರೆ ಮನಿಯಾರ್ಡರ ಮಾಡಲಾಗುವದು ಎಂದು ಮುಂತಾಗಿ ಶ್ರೀಮಲ್ಲಿಕಾರ್ಜುನ ಶಾಸ್ತ್ರಿಗಳು ಪ್ರಸಿದ್ಧಿಸುತ್ತಾರೆ.

ಮಿರಜ (ಕಿರಿ) ಶಾಸನಸಭೆಯ ಅಧಿವೇಶನ ೧೦ ನೇ ತಾರೀಕಿಗೆ ಪ್ರಾರಂಭವಾಯಿತು. ರಾಜೇಸಾಹೇಬರು ಅದರ ಪ್ರಾರಂಭ ಮಾಡುತ್ತ ಹೊಣೆಗಾರ ಸರಕಾರದ ದಾನದ ಬಗ್ಗೆ ತಾವು ವಿಚಾರ ನಡೆಸಿರುವುದಾಗಿಯೂ ದಕ್ಷಿಣ ಸಂಸ್ಥಾನಗಳ ಒಕ್ಕೂಟದ ಯೋಜನೆ ಮಾನ್ಯವಾಗಿ ಸಂಯುಕ್ತ ಸರಕಾರ ಅಸ್ತಿತ್ವದಲ್ಲಿ ಬರುವ ವರೆಗೆ ನಡುಗಾಲ ಸರಕಾರ ಸ್ಥಾಪಿಸುವೆವು. ಕೊನೆಯ ಸೂಚನೆಗಳು ಗೊತ್ತಾದ ಕೂಡಲೆ ಈ ಸಂಸ್ಥಾನದಲ್ಲಿಯೂ ಸುಧಾರಣೆ ಜಾರಿಯಲ್ಲಿ ತರಲಾಗುವದೆಂದೂ ಹೇಳಿದರು.

ಮದ್ರಾಸ ಸರಕಾರದ ಉಪಮಂತ್ರಿಗಳಾದ ಶ್ರೀ ಶಂಕರರೆಡ್ಡಿಯವರು ೯ ನೇ ತಾರೀಕಿಗೆ ಹೊಸಪೇಟೆಗೆ ಹೋಗಿ ಸಾರ್ವಜನಿಕ ಭಾಷಣ ಮಾಡುತ್ತ ಕಾಂಗ್ರೆಸ ಸರಕಾರದ ಜನೋಪಯೋಗಿ ಯೋಜನೆಗಳನ್ನು ಕುರಿತು ಹೇಳಿದರು. ನಾರಾಯಣದೇವರಕೆರೆ ಬಳ್ಳಾರಿ ಮೊದಲಾದ ಸ್ಥಳಗಳಿಗೂ ಅವರು ಭೆಟ್ಟಿಕೊಟ್ಟು ಮಧ್ಯಪಾನ ನಿಷೇಧ ಪ್ರಚಾರಮಾಡಿದರು.

ಪಂಢರಪೂರದ ವಿಠೋಬನ ದೇವಸ್ಥಾನದಲ್ಲಿ ಹರಿಜನ ಪ್ರವೇಶದ ಬಗ್ಗೆ ಸಾರ್ವತ್ರಿಕ ಮತಗಣನೆಯಲ್ಲಿ ನಿರ್ಧರಿಸಲ್ಪಟ್ಟರೆ ತಾವು ಅದಕ್ಕೆ ಒಪ್ಪಿಗೆ ಕೊಡುವುದಾಗಿಯೂ ಈ ಸಾರ್ವತ್ರಿಕ ಮತಗಣನೆ ಎಂತು ನಡೆಸಬೇಕೆಂಬುದನ್ನು ಡಾ. ಜಯಕರರು ಸೂಚಿಸಬೇಕೆಂದೂ ಬಡವೆಯವರು ಹೇಳಿದ್ದಾರೆ.

ಮುಂಬಯಿ ಶಾಸನ ಸಭೆಗಳಲ್ಲಿ ಸ್ವೀಕೃತವಾದ ಹೊಲ ಸಾಗುವಳಿ ಮಸೂದೆಗೆ ಗವ್ಹನರಸಾಹೇಬರು ಒಪ್ಪಿಗೆ ಕೊಟ್ಟದ್ದು ೧೯೪೬ ನೇ ಇಸ್ವಿಯ ನವಂಬರ ೮ ರಿಂದ ಜಾರಿಯಲ್ಲಿ ಬರಬಹುದೆಂದು ಮುಂಬಯಿ ಸರಕಾರದ ಗ್ಯಾಜಿಟನಲ್ಲಿ ಪ್ರಸಿದ್ಧವಾಗಿದೆ.

ಕಳೆದ ಜನೆವರಿಯಿಂದ ಸಿದ್ದಾಪೂರತಾಲೂಕಿನ ಹಳ್ಳಿಗಳಲ್ಲಿ ಹಾವಳಿ ನಡೆಸಿದ್ದ ದೊಡ್ಡದೊಂದು ಹುಲಿಯನ್ನು ಸಶಸ್ತ್ರ ಪೋಲೀಸರನ್ನೊಳಗೊಂಡು ೩೦ ಜನರು ಇತ್ತೀಚೆ ಕೊಂದಿದ್ದಾರೆ. ಈ ಹುಲಿಯನ್ನು ಕೊಂದರೆ ೨೦೦ ರೂಪಾಯಿ ಇನಾಮು ಜಾಹೀರಮಾಡಲಾಗಿತ್ತು.

ಧಾರವಾಡದ ಬಸಪ್ಪಾ ಸುಣಗಾರ ಎಂಬ ೨೪—೨೫ ವಯಸ್ಸಿನ ತರುಣನೋರ್ವನು ೯ ವರ್ಷದ ಕನ್ಯೆಯನ್ನು ಸಿನೇಮಾ ತೋರಿಸುವ ಆಸೆಯಿಂದ ವಿಜಯಟಾಕೀಜಿಗೆ ಕರೆದುಕೊಂಡು ಹೋಗಿ ಹಾಗೆಯೆ ಥಿಯೇಟರಿನಲ್ಲಿ ಕಣ್ಣುತಪ್ಪಿಸಿ ಕುಳಿತುಕೊಂಡು ರಾತ್ರಿ ಹುಡಿಗೆಯ ಮೇಲೆ ಬಲಾತ್ಕಾರ ಮಾಡಿ ನಂತರ ಅವಳ ಕೊಲೆ ಮಾಡಿದನೆಂಬ ಆರೋಪದಿಂದ ಸೆರೆ ಹಿಡಿಯಲ್ಪಟ್ಟಿದ್ದಾನೆ. ಈ ಹುಡಿಗೆಯು ಊರಲ್ಲಿ ಭಿಕ್ಷೆ ಬೇಡುತ್ತ ತಿರುಗುತಿದ್ದಿತು. ಇವನು ಮೊದಲು ದಂಡಿನಲ್ಲಿ ನೋಕರಿ ಮಾಡುತಿದ್ದು ಈಗ ಬಿಡುಗಡೆ ಹೊಂದಿ ೧—೨ ತಿಂಗಳುಗಳಾಗಿವೆ. ಯಾವ ಕೆಲಸವನ್ನೂ ಮಾಡುತಿರಲಿಲ್ಲ.

ಹುಬ್ಬಳ್ಳಿಯ ಶ್ರೀ ಚನ್ನಪ್ಪ ನರಗುಂದ ಇವರು ತಮ್ಮ ಹೆಂಡತಿಯ ತಂಗಿ ಶ್ರೀಮತಿ ಸಿದ್ಧಮ್ಮ ಸೂಗಪ್ಪಾ ನಾಗಶೆಟ್ಟಿ ಆದವಾನಿ ಇವರ ಮರಣ ಕಾಲದ ಇಚ್ಛೆಯ ಮೇರೆಗೆ ಅವರ ಆಸ್ತಿಯಲ್ಲಿ ೧೯೦೧ ರೂ. ಹೂವಿನಹಡಗಲಿ ವಿದ್ಯಾರ್ಥಿನಿಲಯದ ಕಟ್ಟಡಕ್ಕೆ ಮತ್ತು ೨೦೦೧ ರೂ ರಾಜಾಲಖಮಗೌಡ ಸರದೇಸಾಯಿ ಹಾಯಸ್ಕೂಲ ಧಾರವಾಡ ಇಲ್ಲಿಯ ೬ ನೇ ಇಯತ್ತೆಯ ಶಾಸ್ತ್ರೀಯ ವಿಷಯದಲ್ಲಿ ಹೆಚ್ಚು ಗುಣ ಪಡೆದವರಿಗೆ ಶಿಷ್ಯವೇತನ ಕೊಡಲು ದಾನ ಮಾಡಿದ್ದಾರೆ.

ಪಂಡಿತ ಮದನಮೋಹನ ಮಾಲವಿಯವರ ನಿಧನದ ನಿಮಿತ್ತ ಹುಬ್ಬಳ್ಳಿಯಲ್ಲಿ ಹಿಂದುಗಳೆಲ್ಲರೂ ಹರತಾಳ ಪಾಲಿಸಿದರು. ಅಂಗಡಿಗಳೆಲ್ಲ ಮುಚ್ಚಿದ್ದವು. ಸಾಯಂಕಾಲ ಸಭೆ ಸೇರಿ ದು:ಖ ಪ್ರದರ್ಶನ ಮಾಡಲಾಯಿತು. ಬೊಕ್ಕನೆತ್ತಿಯ ಪ್ರಚಂಡ ಮೆರವಣಿಗೆ ನಗರವನ್ನೆಲ್ಲ ಸುತ್ತಿತು. ಪ್ರಾಥಮಿಕ ಮಾಧ್ಯಮಿಕ ಶಾಲೆಗಳಿಗೆಲ್ಲ ಬಿಡುವು ಕೊಡಲಾಗಿದ್ದಿತು. ಸಿನೆಮಾಗಳೂ ಇಂದು ಮುಚ್ಚಲ್ಪಟ್ಟಿದ್ದವು. ಬೇರೆ ಬೇರೆ ಸಂಘ ಸಂಸ್ಥೆಗಳು ಸಭೆ ಸೇರಿ ದು:ಖ ಪ್ರದರ್ಶನ ಮಾಡಿದವು.

ಹೈದರಾಬಾದ್ಸಂಸ್ಥಾನದಲ್ಲಿ ಉತ್ಪನ್ನದ ಮೇಲಿನ ಕರವನ್ನು ಪ್ರಾರಂಭಿಸಲು ನಿಜಾಮ್ರ ಪ್ರಭುಗಳು ಅಪ್ಪಣೆಯಿತ್ತಿದ್ದಾರೆ. ಈ ಸಂಬಂಧದ ಕಚ್ಚಾ ಯೋಜನೆ ತಯಾರಾಗಿದ್ದು ಶೀಘ್ರದಲ್ಲಿ ಪ್ರಸಿದ್ಧವಾಗುವದು. ಅವಶ್ಯ ಕಂಡ ಬದಲಾವಣೆ ಮಾಡಿ ಹಿಂದುಗಡೆ ಅದನ್ನು ಪ್ರಸಿದ್ಧಿಸಲಾಗುವದು.







ಪೂರ್ವ ಬಂಗಾಲದಲ್ಲಿ

# ಹಿಂದುಗಳು ಹೋದರೂ ಮಹಾತ್ಮರು ಉಳಿಯುವರು— ಮುಸ್ಲಿಮರ ನಡುವೆ ಉಳಿದುಕೊಳ್ಳುವ ಪ್ರತಿಜ್ಞೆ:

## ಬಿಹಾರ ಗಲಭೆ ಶಾಂತವಾಯಿತು : ಮಿರತ ಕುಲಾಬಾಗಳಲ್ಲಿ ಹೊಸ ಗಲಭೆ: ಕೇಂದ್ರ ಸರಕಾರದ ನಿರ್ಧಾರ:

### ಬಂಗಾಲದಲ್ಲಿ ಮಹಾತ್ಮರು

ಮಹಾತ್ಮರ ಪೂರ್ವ ಬಂಗಾಲದ ಸಂಚಾರ ಕಾರ್ಯಕ್ರಮ ಬಂಗಾಲ ಸರಕಾರದವರು ವಾಹನ ಸೌಕರ್ಯ ಒದಗಿಸಲು ತಡಮಾಡಿದ್ದರಿಂದ ಮುಂದೆ ಬೀಳುತ್ತ ಹೋದುದು ಕೊನೆಗೊಮ್ಮೆ ತಾ. ೬ಕ್ಕೆ ಪ್ರಾರಂಭವಾಯಿತು. ಅವರು ಈಗ ಪೂರ್ವ ಬಂಗಾಲದ ಹಳ್ಳಿಗಳಲ್ಲಿ ಪರಿವಾರ ಸಹಿತ ಸಂಚಾರ ನಡೆಸುತಿದ್ದಾರೆ. ಉಗಿಬಂಡಿ, ಮೋಟಾರ, ದೋಣಿ ಈ ಎಲ್ಲ ಸಾಧನಗಳಿಂದ ಅವರು ಹಳ್ಳಿ ಹಳ್ಳಿಯಲ್ಲಿ ಹೊಕ್ಕು ಆ ಪ್ರದೇಶಗಳ ಸ್ಮಶಾನ ಸದೃಶವಾಗಿ ಮಾಡಲ್ಪಟ್ಟ ಹಿಂದೂ ನಿವಾಸಗಳನ್ನು ಕಣ್ಣಾರೆ ನೋಡತೊಡಗಿದ್ದಾರೆ. ಚಾವಮೋಹಾನಿಯಲ್ಲಿ ಅವರನ್ನು ಹಿಂದೂ ಮುಸ್ಲಿಂ ಧುರೀಣರು ಸ್ವಾಗತಿಸಿದರು. ಅಲ್ಲಿ ಬಂಗಾಲ ವಿಧಿಮಂಡಲದ ವಿರೋಧಿ ಪಕ್ಷದ ಧುರೀಣರು ಶಿಷ್ಟಮಂಡಲ ತೆಗೆದುಕೊಂಡು ಬಂದು ಅವರಿಗೆ ಪರಿಸ್ಥಿತಿಯನ್ನು ನಿವೇದಿಸಿದರು. ಸಂಕಷ್ಟಕ್ಕೆ ಗುರಿಯಾದ ಅನೇಕ ಜನರಿಂದ ಮಹಾತ್ಮರ ಕಡೆಗೆ ಹೇಳಿಕೆಗಳು ಬಂದವು. ಅತ್ಯಾಚಾರದ ವಿವರಗಳನ್ನು ಅವರಿಗೆ ಒಪ್ಪಿಸಲಾಗಿದ್ದರೂ ಇಂತಿಷ್ಟೇ ಕೊಲೆಗಳು ನಡೆದವೆಂದು ತಿಳಿಯುವದು ಕಠಿಣವಾಗಿದೆ. ಕೋಮಿಲಾದಲ್ಲಿ ೫೨ ಪ್ರಕರಣಗಳನ್ನು ದಾಖಲು ಮಾಡಿಕೊಂಡಿದ್ದು ಅದರಲ್ಲಿ ೩೦ ಸ್ತ್ರೀಯರ ಪಾತಿವ್ರತ್ಯ ಭಂಗ ಮಾಡಿದ್ದೂ ಇದೆ. ೨೫೦ ಅಪರಾಧಿಗಳನ್ನು ಹಿಡಿಯಲಾಗಿದೆ ಇನ್ನೂ ೨೫೦ ಪ್ರಕರಣಗಳಿರುವವೆಂದು ಅಲ್ಲಿ ತಿಳಿದು ಬಂತು. ಎಲ್ಲಕ್ಕಿಂತ ಹೆಚ್ಚಾಗಿ ಈ ಅತ್ಯಾಚಾರಗಳಲ್ಲಿ ಸುಶಿಕ್ಷಿತರ ಅಂಗನಿದ್ದುದು ತಿಳಿಯ ಬಂದಿದೆ.

### ಹಳೆಯ ನೆನಹು

ಚಾವಮೊಹಾನಿಯಲ್ಲಿ ಗಾಂಧೀಜಿಯವರ ಸಾಯಂಪ್ರಾರ್ಥನಾ ಸಭೆಗಳಿಗೆ ವಿಶೇಷ ಜನಸಟ್ಟಣೆ ಬಂದು ಸೇರುತ್ತಿತ್ತು. ಅವರಲ್ಲಿ ನೂರಕ್ಕೆಂಭತ್ತರಷ್ಟು ಮುಸ್ಲಿಮರೇ ಇರುತ್ತಿದ್ದರು. ಮಹಾತ್ಮರು ಖಿಲಾಫತ ಕಾಲದ ಹಿಂದೂ—ಮುಸ್ಲಿಂ ಬಾಂಧವ್ಯದ ನೆನಹು ತಂದುಕೊಂಡು ಆ ಕಾಲದಲ್ಲಿ ತಾವು ಬಂಗಾಲ ಸಂಚಾರಕ್ಕೆ ಬಂದಾಗ ಮುಸ್ಲಿಮರು ತೋರಿದ್ದ ಸೌಹಾರ್ದವನ್ನು ಬಣ್ಣಿಸಿದರು. ಮುಸ್ಲಿಂ ಸ್ತ್ರೀಯರ ಸಭೆಯಲ್ಲಿ ಭಾಷಣಕಾರರು ಕಣ್ಣು ಕಟ್ಟಿಕೊಂಡು ಮಾತಾಡುವ ಪರಿಪಾಠವಿದ್ದ ಆ ಕಾಲದಲ್ಲಿಯೂ ತಮಗೆ ಅಂಥ ನಿಯಮ ಪಾಲಿಸುವ ಅವಶ್ಯಕತೆ ಬೀಳದಷ್ಟು ತಮ್ಮ ಮೇಲೆ ಮುಸ್ಲಿಮರಿಗೆ ವಿಶ್ವಾಸವಿತ್ತೆಂದು ಅವರು ಹೇಳಿದರು. ದಕ್ಷಿಣ ಆಫ್ರಿಕೆಯಲ್ಲಿ ತಾವಿದ್ದ ೨೦ ವರ್ಷಗಳಲ್ಲಿ ತಮ್ಮ ಯಶಸ್ಸಿಗೆ ಮುಸ್ಲಿಮರೇ ಕಾರಣರಾಗಿದ್ದರೆಂದು ಹೇಳಿ ಭಾರತಮಾತೆ ಮಾತ್ರ ಯಾವ ಪಾಪ ಮಾಡಿರುವಳೆಂದು ಕೇಳಿದರು. ಒತ್ತಾಯದ ಧರ್ಮಾಂತರ, ಒತ್ತಾಯದ ಮದುವೆ, ಮೂರ್ತಿ ಧ್ವಂಸ ಮೊದಲಾದವುಗಳ ವರದಿಗಳನ್ನೂ ಅವರು ಉಲ್ಲೇಖಿಸಿದರು. "ಶಾಂತಿ" ಎಂಬ ಅರ್ಥವುಳ್ಳ ಇಸ್ಲಾಮದ ಅನುಯಾಯಿಗಳು ಈ ಕೃತ್ಯಗಳನ್ನು ಎಸಗಿದುದಕ್ಕೆ ಅವರು ಪರಿತಾಪವನ್ನು ವ್ಯಕ್ತಗೊಳಿಸಿದರು. ಈ ಮಾರ್ಗದಿಂದ ಪಾಕಿಸ್ತಾನ ದೊರಕದೆಂದೂ ಅವರು ಸ್ಪಷ್ಟಗೊಳಿಸಿದರು.

### ರಾಮಗುಂಜದ ದೃಶ್ಯಗಳು

ನೌಖಾಲಿ ಜಿಲ್ಲೆಯ ರಾಮಗಂಜ ಪ್ರದೇಶದಲ್ಲಿ ಗಲಭೆ ಅತ್ಯಂತ ದಾರುಣವಾಗಿತ್ತೆಂದು ತಿಳಿದು ಮಹಾತ್ಮರು ಅಲ್ಲಿಗೆ ಭೆಟ್ಟಿಕೊಟ್ಟರು. ರಾಮಗಂಜ ಠಾಣೆಯಲ್ಲಿ ೭೨ ಜನರಿದ್ದ ಒಂದು ಮನೆಯಲ್ಲಿ ೨೨ ಗಂಡಸರಲ್ಲಿ ೧೯ ಜನರ ಕೊಲೆಯಾದುದನ್ನು ಅವರಿಗೆ ತೋರಲಾಯಿತು. ಸುಟ್ಟು ಬೂದಿಯಾದ ಎಲುಬುಗಳೂ ರಕ್ತದ ಒಣಗಿದ ಕಲೆಗಳೂ ಭೀಕರವಾಗಿ ಕಾಣುತ್ತಿದ್ದವು. ಮಧ್ಯಮ ವರ್ಗದವರು ತುಂಬಿದ್ದ ಆ ಅಂದಚಂದದ ಹಳ್ಳಿಯನ್ನು ಪುಂಡರು ಪೂರ್ಣ ಸುಲಿದುಬಿಟ್ಟಿದ್ದರು. ದತ್ತಪಾರಾ ಹಳ್ಳಿಯ ಜನರು ಯಶಸ್ವಿಯಾಗಿ ದಾಳಿಗರನ್ನು ಎದುರಿಸಿದ್ದರಿಂದ ಅಲ್ಲಿ ೫೦೦೦ ನಿರಾಶ್ರಿತರು ಆಶ್ರಯ ಪಡೆದಿದ್ದರು.

ಮಹಾತ್ಮರು ಅಲ್ಲಿ ಭಾಷಣ ಮಾಡುತ್ತ ಪಾಕಿಸ್ತಾನದ ಅಥವಾ ಇನ್ನಾವ ಧ್ಯೇಯವನ್ನಿಟ್ಟುಕೊಂಡಿದ್ದರೂ ಹಿಂದೂ-ಮುಸ್ಲಿಮರು ಸೌಹಾರ್ದದಿಂದ ಬಾಳಬೇಕೆಂದು ಉಪದೇಶಿಸಿದರು. ಹಿಂದೂಗಳು ಭಯಬಿಟ್ಟು ತಮ್ಮ ತಮ್ಮ ಹಳ್ಳಿಗಳಿಗೆ ಮರಳಬೇಕು. ಹಾಗಾದರೆ ಅವರಿಗೆ ಅನ್ನ ಬಟ್ಟೆಗಳನ್ನೊದಗಿಸಲಾಗುವದೆಂದು ಹೇಳಿದರು.

ಚಾವಮುಹಾನಿಯಿಂದ ೧೬ ಮೈಲು ದೂರದಲ್ಲಿರುವ ಲಕ್ಷ್ಮೀಪುರ ಠಾಣೆಯ ದತ್ತಪಾರಾ ಹಳ್ಳಿಯಲ್ಲಿ ಮಹಾತ್ಮಾಗಾಂಧಿಯವರು ಈಗ ವಾಸ್ತವ್ಯವನ್ನು ಹೂಡಿದ್ದಾರೆ. ಅಲ್ಲಿ ೫೪೦೦ ನಿರಾಶ್ರಿತರು ಬಂದು ಸೇರಿದ್ದಾರೆ. ಅವರು ದಿನಾಲು ಸರಕಾರದವರು ಒದಗಿಸಿದ ನಾಲ್ಕು ಚಟಾಕು ಅಕ್ಕಿ ಮತ್ತು ಬೇಳೆಯಿಂದ ಜೀವಧಾರಣೆ ಮಾಡಬೇಕಾಗಿದೆ. ಸುತ್ತಮುತ್ತಲ ಹಳ್ಳಿಗಳಲ್ಲಿನ ದೃಶ್ಯಗಳನ್ನು ನೋಡಿ ಮಹಾತ್ಮರ ಮನಸ್ಸು ಅತ್ಯಂತ ಉದ್ವಿಗ್ನವಾಗಿದೆಯೆಂದು ತೋರುತ್ತದೆ. ಎಂತಲೇ ಅವರು ತಾ. ೧೦ ಕ್ಕೆ ಮಾಡಿದ ಭಾಷಣದಲ್ಲಿ "ನೀವು ನಂಬಿರಿ ಬಿಡಿರಿ ನಾನು ಹಿಂದೂ—ಮುಸ್ಲಿಮರಿಬ್ಬರ ಸೇವಕನಿರುವೆ. ನಾನಿಲ್ಲಿ ಪಾಕಿಸ್ತಾನದ ವಿರುದ್ಧ ಪ್ರಚಾರ ಮಾಡಲು ಬಂದಿಲ್ಲ. ಹಿಂದುಸ್ತಾನ ಎರಡು ಹೋಳಾಗಬೇಕೆಂದು ದೈವೇಚ್ಛೆಯೇ ಇದ್ದರೆ ನಾನು ಅದನ್ನು ತಡೆಯಲಾರೆ... ನೀವು ಒಂದು ರಾಷ್ಟ್ರದ ಪ್ರಜೆಗಳಾಗಿರಲಿ, ಎರಡರವರಾಗಿರಲಿ ನೀವೆಲ್ಲರು ಮಿತ್ರರಂತೆ ಇರಬೇಕೆಂದು ನನ್ನ ಅಪೇಕ್ಷೆ. ಆ ಇಚ್ಛೆ ನಿಮಗಿಲ್ಲದಿದ್ದರೆ ದಾಕ್ಷಿಣ್ಯ ಬಿಟ್ಟು ಹಾಗೆ ಹೇಳಿಬಿಡಿರಿ. ಅಂದರೆ ನಾನು ನನ್ನ ಸೋಲನ್ನೊಪ್ಪಿಕೊಳ್ಳುವೆ...... ನಿರಾಶ್ರಿತರು ನಿರಂತರವಾಗಿ ನಿರಾಶ್ರಿತರಾಗಿಯೆ ಇರಲಾರರು. ಸರಕಾರ ಕೊನೆಯವರೆಗೆ ಅವರ ಹೊಟ್ಟೆತ್ತಿ ನೋಡಿಕೊಳ್ಳಲಾರದು... ಮುಸ್ಲಿಮರು ಹಿಂದೂಗಳ ಮತ್ತು ಅವರ ಹೆಣ್ಣುಮಕ್ಕಳ ಪ್ರಾಣಮಾನಗಳ ರಕ್ಷಣೆಯನ್ನು ತಾವು ಮಾಡುವದಾಗಿ ಆಶ್ವಾಸನ ಕೊಡಬೇಕು. ಇವನ್ನೆಲ್ಲ ನೀವು ಶಾಂತರೀತಿಯಿಂದ ವಿಚಾರ ಮಾಡಿ ಇದು ಸಾಧ್ಯವೋ ಇಲ್ಲವೋ ನನಗೆ ತಿಳಿಸಿ ಬಿಡಿರಿ. ಅಂದರೆ ನಾನು ಅದರಂತೆ ಹಿಂದೂ ಬಾಂಧವರಿಗೆ ಸಲಹೆ ಕೊಡುತ್ತೇನೆ..." ಎಂದು ಹೇಳಿ ಕೊನೆಯಲ್ಲಿ "ಹಿಂದುಗಳು ಮರಳಿ ತಮ್ಮ ಹಳ್ಳಿಗಳಿಗೆ ಹೋಗಲಿ, ಬೇರೆಕಡೆ ಹೊರಟು ಹೋಗಲಿ. ನಾನು ಇಲ್ಲಿಯೇ ಮುಸ್ಲಿಮರ ಮಧ್ಯದಲ್ಲಿ ಉಳಿದುಕೊಳ್ಳುವೆ. ನನಗೆ ಮೀನವಾಗಲಿ ಮಾಂಸವಾಗಲಿ ಬೇಕಿಲ್ಲ. ಹಣ್ಣು ಕಾಯಿಪಲ್ಲೆ, ಆಡಿನ ಹಾಲು ಇಷ್ಟಿದ್ದರೆ ತೀರಿತು. ಬಿಹಾರದ ಹಿಂದುಗಳು ತಮ್ಮ ಕೃತ್ಯಗಳಿಗಾಗಿ ಪಶ್ಚಾತ್ತಾಪಪಡುವವರೆಗೆ ನಾನು ಅನ್ನಸೇವನೆಯನ್ನು ಮಾಡುವಂತಿಲ್ಲ..."

ಮಹಾತ್ಮರ ಸಂಚಾರ ಯಥಾ ಪ್ರಕಾರ ನಡೆದಿದೆ. ಕಾಲ್ನಡಿಗೆಯಿಂದಲೇ ಅವರೆಷ್ಟೋ ಹಳ್ಳಿಗಳಿಗೆ ಹೋಗಿಬಂದಿದ್ದಾರೆ. ಅಳಿಸಿದ ಕುಂಕುಮ, ಒಡೆದ ಬಳೆಗಳ ದು:ಖಿತ ಸ್ತ್ರೀಯರು ಬಂದು ಅವರಿಗೆ ನಿದಾರುಣವಾದ ತಮ್ಮ ಅನುಭವಗಳನ್ನು ಹೇಳಿದರು. ಒಂದೆಡೆ ಬಂಗಾಲದ ಪ್ರಸಿದ್ಧ ಸಂಸ್ಕೃತ ವಿದ್ವಾಂಸರ ಪ್ರಾಚೀನ ಮನೆತನದ ೧೬ ಮನೆಗಳನ್ನೂ ಅವುಗಳ ನಿವಾಸಿಗಳನ್ನೂ ನಿರ್ನಾಮ ಮಾಡಿ ಕಿವುಡನೂ ಮೂಕನೂ ಒಬ್ಬನನ್ನು ಮಾತ್ರ ಬಿಟ್ಟಿದ್ದನ್ನು ಅವರು ಕಂಡರು. ಇನ್ನೊಂದು ಹಳ್ಳಿಯಲ್ಲಿ ವಿಶಿಷ್ಟ ಜಾತಿಯವರ ಮೂರು ಮನೆಗಳನ್ನು ಬಿಟ್ಟು ಉಳಿದ ೪೪ ಮನೆಗಳು ಬೂದಿಯಾಗಿದ್ದುದನ್ನು ತೋರಿಸಲಾಯಿತು. ತಮ್ಮ ಪ್ರತಿಜ್ಞೆಯನ್ನು ಅನುಸರಿಸಿ ಮಹಾತ್ಮರು ಎಷ್ಟು ದಿನ ಅಲ್ಲಿ ಬಿಡಾರ ಮಾಡುವರೆಂದು ಗೊತ್ತಿಲ್ಲ. ಮುಸ್ಲಿಮರ ಹೃದಯ ಪರಿವರ್ತನೆಯೆ ಅವರ ಧ್ಯೇಯವಾಗಿರುವಂತಿದೆ.

### ಒಳ ಗೊಳಗೆ ಕುದಿ

ನೌಖಾಲಿ-ತಿಪ್ಪೇರಾಗಳಲ್ಲಿ ಎಲ್ಲೆಡೆ ಶಾಂತಿ ನೆಲೆಸಿದಂತೆ ತೋರುತ್ತಿದೆ. ಸಜ್ಜನ ಮುಸ್ಲಿಂರು ತಮ್ಮ ಹಿಂದೂ ಬಾಂಧವರು ಮರಳಿ ಹಳ್ಳಿಗಳಿಗೆ ಬರಬೇಕೆಂದು ಬಯಸುತಿರುವರೆಂದು ತಿಳಿಯುತ್ತದೆ. ಕಾಶೀಪುರ ಯೂನಿಯನ್ ಬೋರ್ಡ ಉಪಾಧ್ಯಕ್ಷರಾದ ಅಬ್ದುಲ ವಹಾರರು ಈ ವರೆಗೆ ನಡೆದ ಘಟನೆಗಳಿಗಾಗಿ ವ್ಯಥೆ ವ್ಯಕ್ತಗೊಳಿಸಿ ಮುಸ್ಲಿಮರು ಹಿಂದೂ ಬಾಂಧವರನ್ನು ಕರೆದುಕೊಳ್ಳಲು ಆತುರರಾಗಿರುವರೆಂದು ಚಾವಮುಹಾನಿಯಲ್ಲಿ ಹೇಳಿದರು. ಅದರೆ ಒಳಗೊಳಗೆ ಹಳ್ಳಿಗಳಲ್ಲಿ ಇನ್ನೂ ವಿಷವಿದ್ದಂತೆ ತೋರುತ್ತದೆ. ಇಂಗ್ಲಂಡಿನಲ್ಲಿ ಮಹಾತ್ಮರಿದ್ದಾಗ ಅವರಿಗೆ ಆತಿಥ್ಯವನ್ನಿತ್ತ ಮಿಸ್ ಮ್ಯುರಿಯೆಲ ಲೆಸ್ಟರಳು ಹಳ್ಳಿಗಳಲ್ಲಿ ಸಂಚರಿಸಿ ಬಂದು "ಒತ್ತಾಯದಿಂದ ಮತಾಂತರ ಹೊಂದಿದ ಸ್ತ್ರೀಯರು ತಿರುಗಿ ಹೋಗುವ ಅಪೇಕ್ಷೆಯನ್ನು ಅಧಿಕಾರಿಗಳ ಮುಂದೆ ತೋರಿಸಿದರೆ ಅವರ ಮನೆಯವರನ್ನೆಲ್ಲ ಕಡಿದುಹಾಕುವೆವೆಂದು ಭಯ ತೋರಿಸಲಾಗುತ್ತಿದೆ. ಪುಂಡರು ತಮ್ಮದೇ ರಾಜ್ಯವೆಂಬಂತೆ ದಂಡನೆಯ ಭಯವಿಲ್ಲದೆ ತಿರುಗಾಡುತಿರುವರು. ಮತಾಂತರ ಹೊಂದಿದವರನ್ನು ಬಿಡಿಸಿಕೊಳ್ಳುವದು ಕಷ್ಟಸಾಧ್ಯವೆಂದು ತೋರುತ್ತದೆ." ಎಂದಿರುವಳು. ಮಹಾತ್ಮರ ಬಳಿಗಾದರೂ ಇಂಥ ದೂರುಗಳು ಬಂದಿವೆ. ಒಬ್ಬ ಹಿಂದುವು ಅವರ ಭಾಷಣ ಕೇಳಿ ಹಳ್ಳಿಗೆ ಮರಳಿದಾಗ ಮುಸ್ಲಿಮರು ಅವನ ಮನೆಯನ್ನು ಸುತ್ತುಗಟ್ಟಿ ಒಳಹೋಗಲು ಬಿಡಲಿಲ್ಲವೆಂದು ತಿಳಿದುಬಂದಿದೆ. ಮುಸ್ಲಿಮರು ಕೊಟ್ಟ ಭರವಸೆಯನ್ನು ಹಿಂದುಗಳು ನಂಬಲಾರದವರಾಗಿದ್ದಾರೆ. ಗಲಭೆಗಳಾಗುವ ಲಕ್ಷಣವಿದ್ದಾಗ "ನೀವು ಹೋಗಬೇಡಿರಿ; ನಾವು ನಿಮ್ಮನ್ನು ರಕ್ಷಿಸುತ್ತೇವೆ" ಎಂದು ಹೇಳಿದ ಮುಸ್ಲಿಂ ಗೆಳೆಯರು ಗಲಭೆ ಆರಂಭವಾದಾಗ ಮುಂದೆ ಬರಲೇ ಇಲ್ಲವೆಂದು ಅವರು ದೂರಿಕೊಳ್ಳುತಿರುವರು. ಅದರೂ ಮಹಾತ್ಮರು ದೇವರಲ್ಲಿ ಮತ್ತು ಸಜ್ಜನ ಮುಸ್ಲಿಮರಲ್ಲಿ ವಿಶ್ವಾಸವಿಟ್ಟು ಹಿಂದುಗಳು ತಮ್ಮ ತಮ್ಮ ಹಳ್ಳಿಗಳಿಗೆ ಮರಳಬೇಕೆಂದು ಉಪದೇಶಿಸಿದ್ದಾರೆ.

ಸರಕಾರದವರಲ್ಲದೆ ಪುರೋಗಾಮಿ ಪಕ್ಷದ ಸ್ವಯಂ ಸೇವಕರು, ಮಾರವಾಡಿ ಪರಿಹಾರ [illegible] ಮೊದಲಾದ ಸಂಸ್ಥೆಗಳು ಪರಿಹಾರ ಕಾರ್ಯ ನಡೆಸಿದ್ದಾರೆ. ನಿರಾಶ್ರಿತರು ಅಮಾಂಶ ಬೇನೆಗೆ ತುತ್ತಾಗುವ ಲಕ್ಷಣಗಳಿವೆ.

### ಬಿಹಾರದಲ್ಲಿ ಶಾಂತತೆ

ಬಿಹಾರದಲ್ಲಿ ಜಾತೀಯ ಗಲಭೆ ಈಗ ಶಾಂತವಾಗಿದೆ. ತಾ. ೮ ರಿಂದಲೇ ಪರಿಸ್ಥಿತಿ ಹಿಡಿತಕ್ಕೆ ಬಂದಿದ್ದು ಇದೀಗ ಪೂರ್ತಿಯಾಗಿ ಶಾಂತವಾಗಿದೆಂದು ಮೌ. ಅಬುಲಕಲಮ ಅಝಾದರು ಹೇಳಿಕೆ ಹೊರಡಿಸಿರುವರು. ಮಹಾತ್ಮಾ ಗಾಂಧಿಯವರ ಮಂತ್ರದ ಕೋಲೆಂದು ಒಬ್ಬ ಪತ್ರಿಕಾಕರ್ತನು ಹೆಸರಿಟ್ಟ, ಅವರ ಉಪವಾಸದ ಬೆದರಿಕೆಯಿಂದ ಬಿಹಾರದಲ್ಲಿ ಅತ್ಯಾಚಾರ ತಿರತರಾಗಿದ್ದ ಹಿಂದುಗಳ ರೋಷಕ್ಕೆ ಒಮ್ಮೆಗೇ ತಣ್ಣೀರು ಸುರಿದಂತಾಗಿರಬೇಕು. ರಾಜೇಂದ್ರ ಪ್ರಸಾದರು ಈ ಸಂಬಂಧದಲ್ಲಿ ಹೊರಡಿಸಿದ ಹೇಳಿಕೆಯ ಲಕ್ಷಾಂತರ ಪ್ರತಿಗಳನ್ನು ವಿಮಾನ ಮೂಲಕ ಪುಂಡಾಟದ ಹಳ್ಳಿಗಳ ಮೇಲೆ ಚೆಲ್ಲಲಾಗಿತ್ತು. ಇದಲ್ಲದೆ ಬಾಬು ರಾಜೇಂದ್ರರೂ ಪಂಡಿತ ಜವಾಹರಲಾಲರೂ ಮಾಡಿದ ನಿಷ್ಠುರ ಭಾಷಣಗಳೂ ಇಚ್ಛಿತ ಪರಿಣಾಮವನ್ನು ಮಾಡಿದವೆನ್ನಲಡ್ಡಿಯಿಲ್ಲ.

ಬಿಹಾರದ ಹಿಂದೂಗಳ ಅತ್ಯಾಚಾರ ಬಂಗಾಲದ ಮುಸ್ಲಿಂ ದೌರ್ಜನ್ಯಕ್ಕೆ ಉತ್ತರ ರೂಪವಾಗಿತ್ತೆಂಬುದನ್ನು ಈಗ ಯಾರೂ ಅಲ್ಲಗಳೆಯುವಂತಿಲ್ಲ. ಆದರೆ ಕಾಂಗ್ರೆಸ್ ಮುಂದಾಳುಗಳು ತಕ್ಷಣ ಕಾರ್ಯತತ್ಪರರಾದುದರಿಂದ ಅದು ಬೇಗನೆ ಹಿಡಿತಕ್ಕೆ ಬಂತು. ಬಂಗಾಲದಲ್ಲಿಯಂತೆ ಅತ್ಯಾಚಾರಗಳಿಗೆ ಒಡನೆ ತಡೆಹಾಕಿರದಿದ್ದರೆ ಬಿಹಾರದಲ್ಲಿಯೂ ಇತರ ಪ್ರಾಂತಗಳಲ್ಲಿಯೂ ಅದರ ಭಯಂಕರ ಪ್ರತಿಕ್ರಿಯೆ ಆಗದಿರದೆಂದು ಮೊದಲೇ ಗೃಹಮಂತ್ರಿ ಸರದಾರ ಪಟೇಲರು ವಾಯಿಸರಾಯರನ್ನು ಎಚ್ಚರಿಸಿದ್ದರಂತೆ. ಬಂಗಾಲದಿಂದ ನಾಜೀಮುದ್ದೀನರ ನೇತೃತ್ವದಲ್ಲಿ ಬಂದ ಶಿಷ್ಟಮಂಡಲದವರು ಬಿಹಾರದ ಪರಿಸ್ಥಿತಿಯನ್ನು ನೋಡಿ, ಅಲ್ಲಿನ ಕಾಂಗ್ರೆಸ್ ಮಂತ್ರಿಮಂಡಲವನ್ನು ತೆಗಳಿ ಅನ್ಯಾಯದ ಅಪಾದನೆ ಹೊರಿಸಿದರೂ ಪರಿಸ್ಥಿತಿಯನ್ನು ಹಿಡಿತಕ್ಕೆ ತರಲು ಮುಂದೆ ಬಂದ ಜವಾಹರಲಾಲರನ್ನು ಅಭಿನಂದಿಸಿದರು. ಸ್ವತಃ ಬಿಹಾರದ ಮುಸ್ಲಿಮರೆ ಬಂಗಾಲದ ತಮ್ಮ ಧರ್ಮಬಾಂಧವರ ಕಾಯಕದಿಂದಲೆ ತಮಗೆ ಈ ಗತಿ ಬಂದಿದೆಯೆಂದು ಅರಿತಿದ್ದಾರೆ. ಮೊನ್ನೆ ಬಿಹಾರ ಪ್ರಾಂತ ಮುಸ್ಲಿಂಲೀಗ್ ಕಾರ್ಯದರ್ಶಿಗಳು ಜಿನ್ನಾರಿಗೆ ಬರೆದ ಪತ್ರದಲ್ಲಿ "ಬಿಹಾರ ಮುಸ್ಲಿಮರ ಮೇಲೆ ನಿಮಗೇನಾದರೂ ಕಳಕಳಿ ಇದ್ದರೆ ಬಂಗಾಲದ ಅತ್ಯಾಚಾರಗಳನ್ನು ತಡೆಯಿರಿ" ಎಂದು ಕೇಳಿಕೊಂಡು "ಕಾಂಗ್ರೆಸ್ಸಿಗರು ಮುಸ್ಲಿಮರ ರಕ್ಷಣೆಗಷ್ಟು ಹೆಣಗಿದರೂ ಜನರು ಅವರ ಮಾತುಗಳನ್ನು ಆಲಿಸುವದಿಲ್ಲ. ಬಿಹಾರದಲ್ಲಿ ಮುಸ್ಲಿಮರ ಹೆಸರು ಅಳಿಯಬಾರದೆಂದಿದ್ದರೆ ಬಂಗಾಲದಲ್ಲಿ ಶಾಂತಿ ಸ್ಥಾಪನೆಯಾಗಬೇಕು" ಎಂದಿದ್ದಾರೆ. ಸ್ವತಃ ಜಿನ್ನಾಸಾಹೇಬರೆ ತಮ್ಮ ಮತ್ತು ತಮ್ಮ ಉಗ್ರ ಅನುಯಾಯಿಗಳ ಭಾಷಣಲೇಖನಗಳಿಂದಾದ ಮತ್ತು ಆಗಬಹುದಾದ ಅನಾಹುತವನ್ನು ಮನಗಂಡಂತಿದೆ.. ಅವರು ಈಗ ಹಿಂದೂಗಳನ್ನು "ಹೇಡಿ"ಗಳೆಂದು ಹೇಳುವದನ್ನು ಬಿಟ್ಟು ಮುಸ್ಲಿಮರು "ಶೂರ"ರೆಂದಿಷ್ಟೇ ಹೇಳುತ್ತಾರೆ. ಮೊನ್ನೆ ಹೊರಡಿಸಿದ ಒಂದು ಕಳಕಳಿಯ ಹೇಳಿಕೆಯಲ್ಲಿ "ಬಿಹಾರದ ಮುಸ್ಲಿಮರ ಮೇಲೆ ನಡೆದ ಅತ್ಯಾಚಾರವನ್ನು ಕೇಳಿ ಮುಸ್ಲಿಂ ಬಹುಸಂಖ್ಯಾಕ ಪ್ರಾಂತಗಳ ಮುಸ್ಲಿಮರು ಪ್ರತೀಕಾರ ಮಾಡುವ ಗೋಜಿಗೆ ಹೋಗಬೇಡಿರಿ. ಇಸ್ಲಾಮದ ಹೆಸರಿಗೆ ಕಲಂಕ ಹಚ್ಚಬೇಡಿರಿ. ಹಿಂದೂ ಮುಸ್ಲಿಮರು ಶಾಂತತೆಯಿಂದಿರುವದು ಅವಶ್ಯ. ಅಲ್ಪ ಸಂಖ್ಯಾಕರ ಪ್ರಾಣಮಾನಧನಗಳನ್ನು ರಕ್ಷಿಸುವದು ಮುಸ್ಲಿಮರ ಕರ್ತವ್ಯ" ಎಂದು ಸಾರಿದ್ದಾರೆ.

### ಪ್ರತಿಕ್ರಿಯೆಗಳು

ಬಂಗಾಲ ಬಿಹಾರಗಳ ಘಟನೆಗಳ ಪರಿಣಾಮ ಎಲ್ಲಕ್ಕಿಂತ ಯುಕ್ತಪ್ರಾಂತದಲ್ಲಿ ಬಹಳಾಗಿದೆಯೆ

—೧೪ ನೇ [illegible]

## ಕೇಂದ್ರ ಶಾಸನ ಸಭೆ

( ೪ ನೇ ಪುಟದಿಂದ ಮುಂದರಿದುದು )

ಕೇಂದ್ರ ಸರಕಾರದ ಖಾತೆಗಳಲ್ಲಿಯ ಲಂಚಗುಳಿತನವನ್ನು ಶೋಧಿಸಲು ೧೯೪೩ ರಲ್ಲಿ ಒಂದು ಆರ್ಡಿನನ್ಸಸನ್ನಯ ಇದನ್ನು ಜಾರಿಯಲ್ಲಿ ತರಲಾಯಿತು. ಇವರು ೧೦೨೦ ಪ್ರಕರಣಗಳನ್ನು ಶೋಧಿಸಿ ೬೩೬ ಪ್ರಕರಣಗಳಲ್ಲಿ ಖಟ್ಲೆ ಹಾಕಿದ್ದರು ಇವುಗಳಲ್ಲಿ ೯೯ ಪ್ರಕರಣಗಳಲ್ಲಿ ಇನ್ನೂ ನಿರ್ಣಯವಾಗಿಲ್ಲ. ೩೬೩ ಪ್ರಕರಣಗಳಲ್ಲಿ ಶಿಕ್ಷೆಯಾಗಿದೆ. ಈ ದಲದ ಸಲುವಾಗಿ ಇಲ್ಲಿಯ ವರೆಗೆ ೨೮ ಲಕ್ಷ ರೂ. ವೆಚ್ಚವಾಗಿದೆ. ಖಟ್ಲೆಗಳಲ್ಲಿ ೬-೭ ಲಕ್ಷ ರೂಪಾಯಿ ದಂಡರೂಪದಿಂದ ತಿರುಗಿ ಬಂದಿದೆ. ೨೦ ಕೋಟಿ ರೂಪಾಯಿ ವ್ಯವಹಾರವುಳ್ಳ ಪ್ರಕರಣಗಳನ್ನು ಅವರು ಶೋಧಿಸಿ ಮುಂದಾಗುವ ಹಾನಿಯನ್ನು ತಡೆದಿದ್ದಾರೆ ಹೊರ ಪ್ರಾಂತಗಳಲ್ಲಿ ಸಹ ಇದು ಕೆಲಸ ಮಾಡುತ್ತದೆಂದು ಮುಂತಾಗಿ ಸರದಾರರು ಪ್ರಾಸ್ತಾವಿಕವಾಗಿ ಹೇಳಿದರು. ಅನಂತಶಯನಂ ಅಯ್ಯಂಗಾರರು ಮಸೂದೆಗೆ ಬೆಂಬಲ ಕೊಡುತ್ತ ಜಿಲ್ಹಾ ನ್ಯಾಯಾಧೀಶರ ತರಗತಿಯ ಓರ್ವ ಅಧಿಕಾರಿಯನ್ನು ಈ ದಲದ ಮುಖ್ಯಾಧಿಕಾರಿಯನ್ನಾಗಿ ನೇಮಿಸಬೇಕೆಂದು ಸೂಚಿಸಿದರು.

—ಸಿದ್ದೀಕಿಯವರ ಟೀಕೆಗೆ ಉತ್ತರ ಕೊಡುತ್ತ ಸರದಾರರು ಇದರಲ್ಲಿ ಕ್ರೌರ್ಯವೇನೂ ಇಲ್ಲ. ಜನಸಾಮಾನ್ಯರ ಸುಲಿಗೆಯಾಗಬಾರದೆಂಬ ಕನಿಕರದಿಂದ ಇದನ್ನು ತರಲಾಗಿದೆ. ಈ ದಲದ ಚಟುವಟಿಕೆಯ ಪರಿಣಾಮವಾಗಿ ೩೦ ಗ್ಯಾಜಿಟೆಡ್ ಅಧಿಕಾರಿಗಳೂ ೧೯ ಕಮಿಶಂಡ ಅಧಿಕಾರಿಗಳೂ ಶಿಕ್ಷೆಗೊಳಗಾಗಿರುವರೆಂದು ಹೇಳಿದರು. ನಂತರ ಮಸೂದೆ ಸ್ವೀಕೃತವಾಯಿತು.

ಸ್ವಾಧೀನಪಡಿಸಿಕೊಂಡ ಖಾಸಗಿ ಜನರ ಆಸ್ತಿಯ ಮೇಲೆ ಇನ್ನೂ ಕೆಲಕಾಲ ಸರಕಾರದ ಅಧಿಕಾರವಿರಬೇಕೆಂದು ಸಂರಕ್ಷಣ ಖಾತೆಯ ಕಾರ್ಯದರ್ಶಿಗಳು ಮಂಡಿಸಿದ ಮಸೂದೆಯ ಚರ್ಚೆ ನಡೆಯಿತು. ಅದು ಮುಗಿವ ಮೊದಲೆ ವೇಳೆಯಾದುದರಿಂದ ಸಭೆ ೧೩ ನೇ ತಾರೀಕಿಗೆ ಮುಂದರಿಯಿತು.

ಲಂಚಗುಳಿತನದ ಖಟ್ಲೆಗಳನ್ನು ನಡೆಸಲು ನೇಮಿಸಲ್ಪಟ್ಟ ಸ್ಪೆಶಲ್ ಟ್ರಿಬ್ಯುನಲ್ ಆರ್ಡಿನನ್ಸನ್ನು ಪುನಃ ಜಾರಿಯಲ್ಲಿ ತರಬೇಕೆಂಬ ನ್ಯಾಯ ಮಂತ್ರಿಗಳ ಮಸೂದೆ ೧೩ ನೇ ತಾರೀಕಿನ ದಿವಸ ಸ್ವೀಕೃತವಾಯಿತು. ೧೯೩೯ ನೇ ಮೋಟರ ವಾಹನ ಕಾಯದೆ ತಿದ್ದುಪಡಿ ಮಸೂದೆಯನ್ನು ಪರಿಶೀಲಕ ಸಮಿತಿಗೆ ಒಪ್ಪಿಸಬೇಕೆಂಬ ಮಸೂದೆ ಸ್ವೀಕೃತವಾಯಿತು. ಬ್ಯಾಂಕ ಶಾಖಾ ಕಚೇರಿಗಳ ನಿಯಂತ್ರಣದ ಸಂಬಂಧದಲ್ಲಿ ಅರ್ಥ ಸಚಿವರು ಮಂಡಿಸಿದ ಮಸೂದೆಯ ಚರ್ಚೆ ನಡೆದಿರುವಾಗಲೆ ಸಭೆ ೧೮ ರ ವರೆಗೆ ಮುಂದರಿಯಿತು.

೧೩ ನೇ ತಾರೀಕಿನ ದಿವಸ ಶಾಸನ ಸಭೆಯಲ್ಲಿ ಪಂಡಿತ ಮದನ ಮೋಹನ ಮಾಲವಿಯರ ಸರ್ ಶಿವಸ್ವಾಮಿ ಅಯ್ಯರರ ನಿಧನದ ಬಗ್ಗೆ ದುಃಖ ಪ್ರದರ್ಶಿಸಲಾಯಿತು. ಪಂಡಿತ ನೆಹರು, ಗ್ರಿಫಿತ್ಥ ಯಾಮಿನಖಾನ ಮತ್ತು ಅಧ್ಯಕ್ಷರು ಮಾತಾಡಿ ಮೃತರ ರಾಷ್ಟ್ರ ಕಾರ್ಯವನ್ನು ಬಣ್ಣಿಸಿದರು.

## ಪೂರ್ವ ಬಂಗಾಲದಲ್ಲಿ

( ೧೩ ನೇ ಪುಟದಿಂದ ಮುಂದರಿದುದು )

ನೃಥೀಶ್, ಮೊದಲನೆಯದಾಗಿ ನಾಳಿನ ಕಾಂಗ್ರೆಸ್ ಮಹಾಧಿವೇಶನದ ಸ್ಥಳವಾದ ಮಿರತದಲ್ಲಿ ಕಾಂಗ್ರೆಸ್ ಸಭಾಮಂಟಪವನ್ನು ಪುಂಡರುಸುಟ್ಟು ಧ್ವಾಕ್ಷುಗೆಡಹಿದ್ದಾರೆ. ಇದರಿಂದ ಅಲ್ಲಿಗಲಭೆ ಪ್ರಾರಂಭವಾಗಿದೆ. ಪ್ರಾಂತಿಕ ಸರಕಾರದವರು ಆ ಪ್ರದೇಶವನ್ನು ಗಲಭೆ ಪ್ರದೇಶವೆಂದು ಸಾರಿ ವೇಗನೆ ಶಾಂತಿಸ್ಥಾಪಿಸಲು ತೀಕ್ಷ್ಣ ಉಪಾಯಗಳನ್ನು ಕೈಕೊಂಡಿದ್ದಾರೆ. ಅದೇ ಪ್ರಾಂತದ ಪ್ರಸಿದ್ಧವಾದ ಗುರುಮುಕ್ತೇಶ್ವರ ಜಾತ್ರೆಯ ಯಾತ್ರಿಕರ ಮೇಲೂ ಭಯಂಕರ ಹಿಂಸೆಯಾದ ವಾರ್ತೆ ಬಂದಿದೆ. ಎರಡು ಚಕ್ಕಡಿ ಜನ ಯಾತ್ರಿಕರನ್ನು ಜೀವಂತ ಸುಡಲಾಗಿದೆಯಂತೆ. ಇದರಿಂದ ಸುತ್ತಮುತ್ತಲ ಹಳ್ಳಿಗಳಲ್ಲಿ ಉಗ್ರ ಪರಿಸ್ಥಿತಿಯುಂಟಾಗಿದೆ. ಡಾ. ಹರ್ಡೀಕರ, ಮೇ. ಜ. ಶಾನವಾಜ ಮೊದಲಾದ ಸ್ವಯಂಸೇವಕ ಮುಂಗಾಳುಗಳೂ ಮಂತ್ರಿಗಳೂ ಆ ಭಾಗದಲ್ಲಿ ಸಂಚರಿಸಿದರು. ಈ ಗಲಭೆಗಳಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘದ (ಆರ್. ಎಸ್. ಎಸ್.) ಕೈಯೂ ಇದೆಯೆಂದು ನಂಬಲಾಗಿದೆ. ಮುಂಬಯಿ ನಗರ, ಅಹಮದಾಬಾದ ಮೊದಲಾದೆಡೆಗಳಲ್ಲಿ ದ್ರಾವಕ ಒಗೆಯುವದೇ ಮೊದಲಾದ ದುರಾಚಾರಗಳು ಸಾಗಿದ್ದರೂ ಅದಕಾಗಿ ದೊಡ್ಡ ಪ್ರಮಾಣದಲ್ಲಿ ಬಂಧನಗಳಾಗಿದ್ದರೂ ಕುಲಾಬಾ ಜಿಲ್ಹೆಯಲ್ಲಿ ಆದಿತ್ಯವಾರ ದಿನ ಪ್ರಾರಂಭವಾಗಿ ಇದೀಗ ಮಾತ್ರ ಹಿಡಿತಕ್ಕೆ ಬಂದ ದಂಗೆ ಅವೆಲ್ಲವುಗಳನ್ನು ಮರೆಸುವಂತಿದೆ. ಕುಲಾಬಾದ ಮುನಗಾಂವ, ಮಹಾಡಗಳಲ್ಲಿ ಕೊಲೆ ಸುಲಿಗೆ ಕೊಳ್ಳಿಗಳು, ದನಕರುಗಳ ನಾಶ ಬಹಳವಾಗಿ ಆದವೆಂದು ಸುದ್ದಿ ಬಂದಿದೆ. ಮಿಲಿಟರಿ ಮತ್ತು ಪೋಲೀಸ ಪಡೆ ಬಂದು ಅನೇಕ ಬಾರಿ ಗೋಳಿಬಾರು ಮಾಡಿತು.

ಕೇಂದ್ರ ಸರಕಾರದ ನಿರ್ಧಾರ

ಕೇಂದ್ರ ಸರಕಾರದ ಗೃಹಮಂತ್ರಿಗಳಾದ ಸರದಾರ ವಲ್ಲಭಭಾಯಿಯವರು ಜಾತೀಯ ಗಲಭೆಗಳನ್ನು ನಿಲ್ಲಿಸಲು ಸರಕಾರ ನಿರ್ಧರಿಸಿದೆಯೆಂದು ಕೇಂದ್ರ ಪತ್ರಿಕಾ ಸಲಹೆ ಸಮಿತಿ ಹಾಗು ದಿಲ್ಲಿ ಸಂಪಾದಕರ ಸಂಯುಕ್ತ ಸಭೆಯಲ್ಲಿ ಎಚ್ಚರಿಕೆ ಕೊಟ್ಟು ಪತ್ರಿಕಾ ಸಂಪಾದಕರು ದ್ವೇಷದ ಬೇಗೆ ಹಬ್ಬದಂತೆ ಸಂಯಮದಿಂದ ವರ್ತಿಸಲು ಕೆಲವು ನಿಯಮಗಳನ್ನು ತಾವಾಗಿ ಪಾಲಿಸಿದರೆ ಸರಿ ಇಲ್ಲವಾದರೆ ಯೋಗ್ಯ ಕಾಯಿದೆ ಉಪಾಯಗಳಿಂದ ತಪ್ಪುಗಾರ ಪತ್ರಿಕೆಗಳನ್ನು ದಂಡಿಸುವದಾಗಿ ಹೆದರಿಕೆ ಹಾಕಿದರು. ಪತ್ರಿಕಾ ಸಂಪಾದಕರು ತಾವಾಗಿ ಕೆಲ ನಿಯಮಗಳನ್ನು ಹಾಕಿಕೊಳ್ಳಲು ಒಪ್ಪಿಕೊಂಡಿದ್ದಾರೆ. ಇವು ಸಾಕಷ್ಟು ವ್ಯಾಪಕವಾಗಿಲ್ಲವಾದರೂ ಸಂಪಾದಕರು ಹೊಣೆಯರಿತು ಇದಕ್ಕೆ ಹೂಗುಟ್ಟಿ ಗಲಭೆಸುದ್ದಿಗಳನ್ನು ಪ್ರಕಟಿಸುವರೆಂದಾಶಿಸಿದರು. ಸಂಪಾದಕರು ಸಂಯಮದಿಂದ ಬರೆಯದಿದ್ದರೆ ಕಠೋರ ಕ್ರಮಗಳನ್ನು ಕೈಕೊಂಡು ಆಳುವವರಿಬೇದಾಗಿ ಅವರು ಕೊನೆಯೆಚ್ಚರಿಕೆಯಿತ್ತರು. ಆದರೆ ಮುಸ್ಲಿಂ ಪತ್ರಿಕೆಗಳ ಪರಿಷತ್ತಿನ ಅಧ್ಯಕ್ಷರೂ ದಿಲ್ಲಿಯ ಲೀಗ್ ಪತ್ರಿಕೆಯಾದ "ಡಾನ"ದ ಸಂಪಾದಕರೂ ಆದ ಅಲ್ತಾಫ ಹುಸೇನರು ಒಂದು ಹೇಳಿಕೆ ಹೊರಡಿಸಿ, ಅನೇಕ ಕುಂಟು ನೆವಗಳನ್ನು ಮುಂದೊಡ್ಡಿ ಎಲ್ಲ ಪ್ರಾಂತಗಳಲ್ಲಿಯೂ ಈ ನಿಯಮಗಳು ಸರಿಯಾಗಿ ಪಾಲಿಸಲ್ಪಟ್ಟರೆ ಮಾತ್ರ ಮುಸ್ಲಿಂ ಪತ್ರಿಕೆಗಳು ಅವುಗಳನ್ನು ಅನುಸರಿಸಲು ಬದ್ಧವಾಗುವವೆಂದೂ ಕೇಂದ್ರ ಸರಕಾರದ ಅಡಳಿತಗೆ ಸೇರಿದ ದಿಲ್ಲಿಯಲ್ಲಿ ಮಾತ್ರ ನಿಯಮಗಳನ್ನು ಹಾಕಿದರೆ ಸಾಲದೆಂದೂ ಮುಸ್ಲಿಂ ಪತ್ರಿಕೆಗಳ ಮೇಲೆ ಮಾತ್ರ ನಿರ್ಬಂಧ ಬಿದ್ದರೆ ಅದನ್ನು ಎದುರಿಸುವದಾಗಿಯೂ ಹೇಳಿ ಕೇಂದ್ರದ ಮುಸ್ಲಿಂ ಮಂತ್ರಿಗಳು ಮುಸ್ಲಿಂ ಪತ್ರಿಕೆಗಳ ಹಿತಕಾಯಬೇಕೆಂದು ಕೇಳಿಕೊಂಡಿರುವರು. ಜಾತೀಯ ವಿಷ ತುಂಬಿದ ಲೇಖನಗಳನ್ನು ಬರೆಯುವಲ್ಲಿ ಡಾನ್ ಪತ್ರಿಕೆ ನಿಸ್ಸೀಮವಾಗಿದೆಯೆಂಬದನ್ನು ಮರೆಯಲಾಗದು.

## ಮೈಸೂರು-ಬೆಂಗಳೂರು

ಮೈಸೂರು ಸರಕಾರದವರು ಒಂದು ಹುಕುಮು ಹೊರಡಿಸಿ ಕೈಮಗ್ಗದ ಅರಿವೆಗಳ ಬೆಲೆಯನ್ನು ನಿಯಂತ್ರಿಸಿದ್ದು ಸೋಕದಾರನು ಕಿರಕುಳ ವ್ಯಾಪಾರಿಗೆ ಮೂಲ ಬೆಲೆಯ ನೂರಕ್ಕೆ ೪ ಕ್ಕಿಂತ ಹೆಚ್ಚು ಲಾಭವಿಟ್ಟು ಸರಕು ಮಾರತಕ್ಕದ್ದಲ್ಲ ಮತ್ತು ಕಿರಕುಳ ವ್ಯಾಪಾರಿ ೧೦೦ ಕ್ಕೆ ೧೪ ಕ್ಕಿಂತ ಹೆಚ್ಚು ಲಾಭ ಮಾಡಿ ಜನರಿಗೆ ಮಾರತಕ್ಕದ್ದಲ್ಲವೆಂದು ವಿಧಿಸಿದ್ದಾರೆ.

ಕೋಲಾರದಲ್ಲಿ ಕೆಲದಿನಗಳ ಹಿಂದೆ ಕಮ್ಯುನಿಸ್ಟ್ ಮತ್ತು ಅಂಬೇಡಕರ ಪಕ್ಷದವರ ನಡುವೆ ಆದ ಹೋರಾಟದ ಫಲವಾಗಿ ಪೋಲೀಸ ಗೋಳಿಬಾರ ನಡೆದ ಸಂಬಂಧದಲ್ಲಿ ಮೈಸೂರು ಕಾಂಗ್ರೆಸ್ ಅಧ್ಯಕ್ಷರು ಪ್ರತ್ಯಕ್ಷ ಪರಿಶೀಲನೆಯ ನಂತರ ಒಂದು ಹೇಳಿಕೆ ಹೊರಡಿಸಿದ್ದು, ಗೋಳೀಬಾರು ಅನವಶ್ಯಕ ಮತ್ತು ಅನಧಿಕೃತವಿತ್ತೆಂದೂ ಪೋಲೀಸರು ಸತ್ತವರನ್ನೂ ಗಾಯಗೊಂಡವರನ್ನೂ ಸಭ್ಯತೆ ಬಿಟ್ಟು ಬೀದಿಯಲ್ಲಿ ಎಳೆದಾಡಿದರೆಂದೂ ಕೂಲಿಕಾರರಲ್ಲಿ ಜಾತೀಯ ದ್ವೇಷಗಳನ್ನು ಹೆಚ್ಚಿಸಿ ಅವರ ಸಂಘಟನೆಯನ್ನು ಮುರಿಯುವದೇ ಸರಕಾರದ ಉದ್ದೇಶವೆಂದೂ ಆರೋಪಿಸಿದ್ದಾರೆ. ಇನ್ನೂ ಸಿಕ್ಕಸಿಕ್ಕಂತೆ ಬಂಧನಗಳು ನಡೆದಿವೆಯೆಂದೂ ಅವರ ಹೇಳಿಕೆ.

ತಾ. ೮ ಕ್ಕೆ ಬೆಂಗಳೂರು ಲಾಲಬಾಗ ಸಿದ್ದಾಪುರದಲ್ಲಿ ಹರಿಜನಪುರದ ಶಂಕುಸ್ಥಾಪನೆಯ ಸಮಾರಂಭವನ್ನು ಮೈಸೂರು ಮಹಾರಾಜರು ನಡೆಸಿದರು. ಅವರಿಗೆ ಬೆಂಗಳೂರು ನಗರ ಸಭೆ ರಾಜಭಕ್ತಿಯ ಬಿನ್ನವತ್ತಳೆ ಅರ್ಪಿಸಿತು. ಮಲ್ಲೇಶ್ವರದ ಶ್ರೀ ಕೆಂಪುಚೆಲುವರಾಜಮ್ಮಣ್ಣಿ ಹೆರಿಗೆ ಆಸ್ಪತ್ರಿಯ ಶಂಕುಸ್ಥಾಪನೆಯು ಶ್ರೀಮನ್ಮಹಾರಾಜರ ಹಸ್ತದಿಂದ ತಾ. ೮ ಕ್ಕೆ ನೆರವೇರಿತು.

## ದಕ್ಷಿಣ ಕನ್ನಡ

ಬಂಗಾಲ ಬಿಹಾರಗಳಲ್ಲಿ ದಂಗೆಗಳಿಂದ ನಿರಾಶ್ರಿತರಾದವರ ಸಹಾಯಾರ್ಥ ಮಂಗಳೂರಿನ ರಾಷ್ಟ್ರೀಯ ರಂಗಭೂಮಿಯವರು ತಾ. ೨೩ ಶನಿವಾರ ವಿವಿಧವಿನೋದಾವಳಿಗಳನ್ನು ಏರ್ಪಡಿಸಿ ನಿಧಿ ಸಂಗ್ರಹಿಸಲಿರುವರು. ಮಹಾಜನರ ಸಹಾಯ ಕೋರಲಾಗಿದೆ.

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಹಾ ಅಡಿಕೆ ತೋಟಗಾರರು ಕಂದಾಯ ಮಂತ್ರಿಗಳಿಗೆ ಒಪ್ಪಿಸಿದ ಮನವಿಯನ್ನು ಮಾನ್ಯಮಾಡಿ ಅಡಿಕೆ ತೋಟಗಾರರಿಗೆ ಎಕರೆಗೆ ೨ ಜನರಂತೆ ಕೂಲಿಜನರ ಸಲುವಾಗಿ ಹತ್ತು ತಿಂಗಳ ಸೀದಾವನ್ನು ಸಂಗ್ರಹಿಸಿಡಲು ಸರಕಾರದವರು ಅನುಮತಿಯೀಯುವರೆಂದು ತಿಳಿಯುತ್ತದೆ.

ಪುತ್ತೂರಿನ ತಾಮ್ರ ಹಿತ್ತಾಳೆ ವ್ಯಾಪಾರಿಗಳಾದ ಶ್ರೀ ಚಂದುಸೆಟ್ಟಿಯವರ ಅಂಗಡಿಯನ್ನು ಜಡತಿ ಮಾಡಿ ಲೆಕ್ಕಕ್ಕೆ ಮಿಕ್ಕಿದ ತಾಮ್ರ ಹಿತ್ತಾಳೆ ತಗಡುಗಳು ದೊರೆತುದರಿಂದ ಅವರನ್ನು ಬಂಧಿಸಲಾಗಿದೆ.

## ವ್ಯಾಪಾರ ಪ್ರಪಂಚ

### ಮುಂಬಯಿ

ಮುಂಬಯಿ ಶೇರ್ ಪೇಟೆಯಲ್ಲಿ ಬೆಲೆಗಳು ಅಲ್ಪ ಅಂತರದಲ್ಲಿ ಏರಿಳಿತ ತೋರಿಸುತ್ತಿವೆ. ಬ್ಯಾಂಕ ದರ ಇಳಿಯುವ ಆಶೆಯಿಂದಲೂ ಸುದ್ದಿಗಳು ಬರುವವೆಂಬ ನಂಬಿಕೆಯಿಂದಲೂ ವ್ಯಾಪಾರಿಗಳು ಧೈರ್ಯ ಹಿಡಿದಿದ್ದರೂ ಸಾರ್ವತ್ರಿಕ ಅಶಾಂತತೆಯಿಂದ ಬೆಲೆಗಳು ನಿಷ್ಕ್ರಿಯವಾಗಿವೆ. ತಾ. ... ಕ್ಕೆ ೨೯೩೨—೮—೦ ಯಲ್ಲಿದ್ದ ಟಾಟಾ ಡಿಫರ್ಡ ಶೇರು ... ಕ್ಕಿಳಿದು ... ಕ್ಕೇರಿದೆ. ಮುಂಬಯಿ ಡಾಯಿಂಗ್ ೩೦೪೦-೦-೦ ರಿಂದ ೨೯೬೫—೦ ಕ್ಕಿಳಿಯಿತು. ... ೪೨೨ ರಿಂದ ೪೧೮—೦—೦ ಕ್ಕಿಳಿದು ೪೧೯-೦-೦ ಕ್ಕೆ ಸುಧಾರಿಸಿತು. ಕೊಹಿನೂರು ೯೪೯ ರಿಂದ ೯೩೩ ಕ್ಕಿಳಿದು ೯೪೨-೮—೦ ಕ್ಕೆ ಸುಧಾರಿಸಿತು. ಸ್ವದೇಶಿ ೭೩೨-೦-೦ ರಿಂದ ೭೫೯-೦-೦ ಕ್ಕಿಳಿದು ೭೬೩-೦-೦ ಕ್ಕೇರಿತು. ಗೋಕಾಕ, ೪೦೩-೦-೦ ರಿಂದ ೩೯೨-೦-೮ ಕ್ಕಿಳಿದು ೩೯೭-೦-೮ ಕ್ಕೇರಿತು. ಸಿಂಧ್ಯಾ ಸ್ಟೀಮ ೪೮-೬-೦ ರಿಂದ ೪೮-೩-೦ ಕ್ಕಿಳಿದು ೪೮-೧೦-೦ ಕ್ಕೂ ಅಸೋಸಿಯೇಟೆಡ ಸಿಮೆಂಟ್ಸ ೨೪೩-೮-೦ ರಿಂದ ೨೪೫-೮-೦ ಕ್ಕೂ ಸುಧಾರಿಸಿದವು. ಬ್ಯಾಂಕುಗಳಲ್ಲಿ ಸೆಂಟ್ರಲ್ ೧೩೩-೧೨-೦ ರಿಂದ ೧೩೨ ೦-೦ ಕ್ಕೂ ಇಂಪೀರಿಯಲ್ ಎಸ್ ಸಿ ೨೪೪೫-೦-೦ ರಿಂದ ೨೪೫೦—೦—೦ ಕ್ಕೆ ೨೪೪೨-೦-೦ ಇಳಿದು ಪುನಃ ೨೪೪೫-೦-೦ ಕ್ಕೇ ಬಂತು. ರಿಝುರ್ವ ೧೫೫-೮-೦ ರಿಂದ ೧೫೩-೦-೦ ಕ್ಕಿಳಿದು ೧೫೬-೦-೦ ಕ್ಕೇರಿತು.

ಜಿ. ಪಿ. ನೋಟ ೧೦೪-೧೪-೦ ೧೦೪-೧೫-೦ ಕ್ಕೂ ೩॥೦/೦ (೧೯೪೭—೫೦) ೧೦೨—೨—೦ ರಲ್ಲಿಯೂ ಇವೆ.

### ಬೆಳ್ಳಿ—ಚಿನ್ನ

ಚಿನಿವಾರ ಕಟ್ಟೆಯಲ್ಲಿ ಈಚೆಗೆ ಬುಲಿಯನ್ ಎಕ್ಸ್‌ಚೇಂಜದವರು ವಾಯಿದಾ ವ್ಯಾಪಾರಕ್ಕೆ ಹೊಸ ನಿಯಮಹಾಕಿದ್ದರಿಂದ ಕ್ಷಿಪ್ರ ವ್ಯಾಪಾರ (ಶಾರ್ಟಕವ್ಹರಿಂಗ್) ಹೆಚ್ಚಾಗಿ ಲಾಭಬಡಕರಿಗೆ ಒಳ್ಳೆ ಅನುವು ದೊರೆತಿದೆ, ಸರಕಾರ ಇದನ್ನು ನಿಯಂತ್ರಿಸಬೇಕು. ತಯಾರಿ ಚಿನ್ನ ೧೦೦-೦-೦ ಯಿಂದ ಎಂಟಾಣೆ ಹೆಚ್ಚು ಕಡಿಮೆ ಹೀಗೆ ತಿರುಗಾಡುತಿದೆ. ವಾಯಿದಾ ೯೦—೩—೦ ಯಿಂದ ೮೭—೧೨—೦ ಗೆ ಬಂದಿದೆ. ಬೆಳ್ಳಿ ತಯಾರಿ ೧೬೦—೧೨—೦ ರಿಂದ ೧೫೪—೮—೦ ಕ್ಕಿಳಿದು ೧೫೫—೦—೦ ಕ್ಕೇರಿತು. ವಾಯಿದಾ ೧೪೭-೨-೦ ರಲ್ಲಿ ಮುಕ್ತಾಯವಾಯಿತು.

### ಅರಳೆ

ಅರಳೆ ಬೆಲೆಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಮಾತ್ರ ಆಗುತ್ತಿದೆ. ಜನೇವರಿ ವಾಯಿದಾ ೪೫೮—೪—೦ ರಿಂದ ೪೫೬—೦—೦ ಕ್ಕಿಳಿದು ೪೫೮—೦—೦ ಕ್ಕೆ ಸುಧಾರಿಸಿತು. ಮಾರ್ಚ ೪೬೬—೦—೦, ಮೇ ೪೭೩—೮—೦, ಜುಲೈ ೪೮೦—೦—೦ ರಲ್ಲಿ ಮುಕ್ತಾಯವಾದುವು.

### ಸಾಂಗಲಿ ಪೇಟೆ

| | | |
|---|---|---|
| ಅರಿಷಣ ಹೇರು | | ೯೪-೯೬ |
| ಶೇಂಗಾ ಖಂಡಿ | ,, | ೬೫-೮೦ |
| ಮೆಣಸಿನಕಾಯಿ ಹೇರು | ,, | ೧೩೦-೧೮೦ |
| ಮಿರ್ಜಿ ತಂಬಾಕು ಹೇರು | | ೧೦೦-೨೦೦ |
| ತಂಬಾಕ ಪಂಢರಪುರಿ | ,, | ೧೫೦-೨೫೦ |
| ತಂಬಾಕು ಅಕೋಳ(ಹೇರು) | | ೨೫೦-೩೭೫ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೮೦ |
| ,, | ನಂ. ೨ | ೨೭೦ |
| ,, | ನಂ. ೩ | ೨೬೦ |
| ಅಪ್ಲಂಡ ಹತ್ತಿ | | ೨೫೦-೨೬೦ |
| ಜಿನ | | ೨೦೦ |
| ಸಾಜಿನ | | ೧೮೦ |
| ಡಬಲರೋಲ | | ೧೮೦-೧೮೫ |





## ವಾರದ ಕತೆ

# 'ಅಕ್ಕಾ'

ಕತೆಗಾರ್ತಿ — ಕು. ಶಕುಂತಲಾ ಕೆರೂರ

ಇಂದು ಪರಿಣಾಮ ದಿನ. ಎಲ್ಲ ಹುಡುಗರೂ ಶಾಲೆಯೆದುರು ನೆರೆದಿದ್ದಾರೆ. ಮಾಧು ಮಾತ್ರ ಮನೆಯಲ್ಲಿ ಮೂಲೆಯಲ್ಲಿ ಕೂತುಬಿಟ್ಟಿದ್ದ. ಅವನ ಸ್ಥಿತಿಯನ್ನು ಯಾರೂ ವರ್ಣಿಸಲಾರರು. ಅವನಿಗೀಗ ಆನಂದವೊ, ವ್ಯಥೆಯೋ, ವಿಚಾರವೊ ಏನೊ ತಿಳಿಯದು. ಪರೀಕ್ಷೆಯಲ್ಲಿ ಉತ್ತಮ ರೀತಿಯಲ್ಲಿ ಪಾಸಾಗುವೆನೆಂದು ಅವನ ಪೂರ್ಣ ನಂಬಿಗೆ. ಆದರೆ ? ಆದರೆ ಮುಂದೇನು? ಎಂದು ಮನಸ್ಸು ಕೇಳುತ್ತಿತ್ತು. ಸೀತೆಯಾದರೊ, ತನ್ನಷ್ಟಕ್ಕೆ ಮನೆಗೆಲಸದಲ್ಲಿ ಮಗ್ನಳಾಗಿದ್ದಳು. ಇಷ್ಟರಲ್ಲಿ, ಹುಡುಗರ ತಂಡವು ಮಾಧೂ-ನನ್ನು ಕೂಗುತ್ತ ಬಂತು. ಉಪಾಯಕಾಣದೆ, ಮಾಧು ಹೊರಗೆ ಬಂದ. ಎಲ್ಲರೂ ಅತನನ್ನು ಹೊಗಳಿ ಕರೆದುಕೊಂಡು ಹೊರಟರು. ಮಾಧು ಶಾಲೆಗೆ ಮೊದಲನೆಯವನಾಗಿ ಪಾಸಾಗಿದ್ದ. ಇದನ್ನು ಕೇಳಿ ಸೀತೆ ಹಿಗ್ಗಿದಳು.

ಮಾಧು ಒಬ್ಬ ಕಾರಕೂನರ ಮಗ. ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡಿದ್ದ. ಇಷ್ಟು ದಿನಗಳ ವರೆಗೆ ಆಧಾರವಾಗಿದ್ದ ತಾಯಿ ತೀರಿ ವರ್ಷವಾಗಿತ್ತು. ಈಗ ಮನೆಯಲ್ಲಿರುವವರು ಕೇವಲ ಸೀತೆ ಮತ್ತು ಮಾಧವರು. ಚಿಕ್ಕಂದಿನಲ್ಲೇ ಪತಿಯನ್ನು ಕಳೆದುಕೊಂಡ ಸೀತೆಗೆ ಮಾಧುವೇ ಸರ್ವಸ್ವ. ಅವನ ಸುಖಕ್ಕಾಗಿ ಅವಳು ಹಗಲಿರುಳು ದುಡಿಯುತ್ತಿದ್ದಳು. ಇಂದು ಮಾಧೂನ ಯಶಸ್ಸನ್ನು ಕೇಳಿ, ಅವಳಿಗೆ ಹಿಡಿಸಲಾರದಷ್ಟು ಸಂತೋಷ. ಆದರೆ ನೋಡುವದಕ್ಕೆ ತಾಯಿತಂದೆ ಇಲ್ಲವೆಂದು ವ್ಯಥೆ.

ಹಳ್ಳಿಯಲ್ಲಿ ಕೇವಲ ೫ ಇಯತ್ತೆಗಳ ವರೆಗೆ ಶಾಲೆ ಇದ್ದದ್ದರಿಂದ, ಮುಂದೆ ಕಲಿಯಲು ಸಮೀಪದ ಪಟ್ಟಣಕ್ಕೆ ಹೋಗಬೇಕಿತ್ತು. ಮಾಧೂಗೆ ಮನಸ್ಸಿದ್ದರೂ, ಬುದ್ಧಿ ಇದ್ದರೂ ಮುಂದೆ ಹೋಗಲು ಹಣವಿರಲಿಲ್ಲ. ಬಡತನದಲ್ಲಿ ಕಾಲಕಳೆದ ಸೀತೆಗೆ ಅವನನ್ನು ಮುಂದೆ ಓದಿಸಿ ಸುಖಿಯನ್ನಾಗಿ ಮಾಡಬೇಕೆಂಬ ಮನಸ್ಸು. ಕಾರಣ ಅವನಿಗೆ ಪಟ್ಟಣಕ್ಕೆ ಹೋಗಲು ಒತ್ತಾಯಪಡಿಸಹತ್ತಿದಳು. ತಾನು ಹೇಗಾದರೂ ಮಾಡಿ ತಕ್ಕ ಮಟ್ಟಿಗೆ ಸಹಾಯ ಮಾಡುವೆನೆಂತಲೂ ಅಲ್ಲದೆ, ಪಟ್ಟಣದಲ್ಲಿ ಯಾರದಾದರೂ ಆಶ್ರಯ ಸಿಗಬಹುದೆಂದು ಅವಳ ನಂಬಿಕೆ.

ಮಾಧು ಪಟ್ಟಣಕ್ಕೆ ಬಂದ. ಅಲ್ಲಿಯ ಸಡಗರವನ್ನೂ ಬೆಡಗನ್ನೂ ಕಂಡು ಬೆರಗಾದ, ತನಗೆ ಎಲ್ಲಿಯಾದರೂ ಆಶ್ರಯ ಸಿಗಬಹುದೆಂದು ಬಗೆದ. ಗುರುಗಳು ಕೊಟ್ಟಿರುವ ಸಿಫಾರಸ ಪತ್ರವನ್ನು ಹಿಡಿದುಕೊಂಡು ಮನೆಯಿಂದ ಮನೆಗೆ ಅಲೆಯಹತ್ತಿದನು. ಆದರೆ ಅವನಿಗೆ ಒಂದು ಮೃದು ಮಾತನ್ನು ಕೂಡ ಯಾರೂ ಆಡಲಿಲ್ಲ. ದಿನಗಳ ಮೇಲೆ ದಿನಗಳುರಳಿದವು. ಆದರೆ, ಮಾಧೂಗೆ ಆಶ್ರಯ ಸಿಗುವ ಚಿಹ್ನ ತೋರಲಿಲ್ಲ. ತಂದ ಹಣವೆಲ್ಲ ತೀರಿತು.

ಮಧ್ಯಾಹ್ನದ ಒಂದು ಗಂಟೆ. ಮಾಧು ಅಲೆಯುತ್ತ ಅಲೆಯುತ್ತ ಒಂದು ಬಂಗಲೆ ಎದುರು ಬಂದ. ಆ ಬಂಗಲೆಯ ಆಳು ಅವನನ್ನು ಒಳಗೆ ಬಿಡಲಿಲ್ಲ. ಮಾಧು ಅವನಿಗೆ ಅಂಗಲಾಚಿ ಬೇಡಿಕೊಳ್ಳುತ್ತಿದ್ದ. ಇಷ್ಟರಲ್ಲಿ ಮನೆಯ ಯಜಮಾನ ಹೊರಗೆ ಬಂದು ಮಾಧುವನ್ನು ನೋಡಿ 'ಯಾರು?' ಎಂದು ಪ್ರಶ್ನಿಸಿದ. ಮಾಧು ದೀನವಾಣಿಯಿಂದ ತನ್ನ ಸ್ಥಿತಿಯನ್ನು ವರ್ಣಿಸಿ ಸಿಫಾರಸ ಪತ್ರವನ್ನು ಅವನ ಕೈಗೆ ನೀಡಿದ. ಅದನ್ನು ಪೂರ್ತಿ ನೋಡದೆ ಯಜಮಾನನೆಂದ: "ಈಗಾಗಲೆ ತುಂಬಾ ಜನಗಳಿದ್ದಾರೆ, ನಿನಗೆ ಸ್ಥಳವಿಲ್ಲ." ಮಾಧು ನಿರಾಶನಾಗಿ, ಜಡವಾದ ಹೆಜ್ಜೆಗಳನ್ನಿಡುತ್ತ ಸಾವಕಾಶವಾಗಿ ತಿರುಗಿ ನಡೆದ. ಅಷ್ಟರಲ್ಲಿ ಯಜಮಾನ ಮತ್ತೆ ಕೂಗಿ ತನ್ನ ಜವಾನನಿಗೆ ಯಾರದೋ ಮನೆಯನ್ನು ತೋರಿಸಲು ಹೇಳಿದ. ಮಾಧುವಿನ ಮನಸ್ಸಿನಲ್ಲಿ ಮತ್ತೆ ಆಶಾಕಿರಣ ಹೊಳೆಯಿತು. ಆ ಜವಾನ ಅವನನ್ನು ಆ ಮನೆಯೆದುರು ಒಯ್ದು ಒಳಗೆ ಹೋಗಲು ಹೇಳಿ ತಾನು ಅಲ್ಲಿಯೇ ನಿಂತುಕೊಂಡನು. ಬಾಗಿಲು ಮುಚ್ಚಿತ್ತು. ಮಾಧು ಸಾವಕಾಶವಾಗಿ ಬಾಗಿಲು ಬಡೆದ. ೨೫—೨೬ ವರ್ಷದ ಯುವತಿ ಬಾಗಿಲು ತೆರೆದು ಯಾರು ಎಂದು ಕೇಳಿದಳು. ಮಾಧು ತಾನು ಬಡ ವಿದಾರ್ಥಿ ಎಂದು ಹೇಳಿ ಶಿಫಾರಸ ಪತ್ರವನ್ನು ಮುಂದು ಚಾಚಿದ. ಅದಕ್ಕವಳು ಊಟವಾಗಿದೆಯೋ ? ಎಂದಳು. ಮಾಧುಗೆ ದುಃಖ ತಡೆಯದಾಯಿತು. ಪಟ್ಟಣಕ್ಕೆ ಬಂದು ವಾರವಾಗಿದ್ದರೂ, ಯಾರೂ ಇಂಥ ಮೃದು ಮಾತನ್ನು ಆಡಿರಲಿಲ್ಲ. ಅವನು, ತಾಯಿ ಮೂರು ದಿವಸಗಳಿಂದ ಊಟವಿಲ್ಲವೆಂದು ಹೇಳಿದ. ಅವನ ಕಣ್ಣುಗಳು ಅಶ್ರುಪೂರಿತವಾಗಿದ್ದವು. ಸುಶೀಲೆ (ಆ ಯುವತಿ) "ಮೊದಲು ಊಟ ಮಾಡು ನಡೆ" ಯೆಂದು ಅವನನ್ನು ಒಳಕ್ಕೆ ಕರೆದುಕೊಂಡು ಹೋದಳು. ಊಟವಾದ ಮೇಲೆ ಸಾವಧಾನವಾಗಿ ಎಲ್ಲ ವಿಷಯವನ್ನು ಕೇಳಿ ಸುಶೀಲೆ 'ಇಲ್ಲೆ ಇದ್ದು ಬಿಡು ನನಗೂ ಯಾರೂ ಇಲ್ಲ' ಎಂದಳು. ಮಾಧೂಗೆ ಸ್ವಲ್ಪ ಸಮಾಧಾನವಾಯಿತು. ಹೋದ ಜೀವ ಬಂದಂತಾಯಿತು.

ಸೂಟಿ ಬಂತು. ಮಾಧು ಮನೆಗೆ ಬಂದ. ವರ್ಷದಲ್ಲಿಯೇ ಅವನಲ್ಲಾದ ಮಾರ್ಪಾಡನ್ನು ಕಂಡು, ಸೀತೆಗೆ ಆನಂದಾಶ್ಚರ್ಯವಾಯಿತು. ಅವನ ಬಡಕಲ ದೇಹ ತುಂಬಿಕೊಂಡಿತ್ತು. ಅವನುಟ್ಟ ಬಟ್ಟೆಗಳು ಸ್ವಚ್ಛವಾಗಿದ್ದವು. ಅವನು ಗಂಭೀರನೂ ಶಾಂತನೂ ಆಗಿದ್ದ. ಅವನ ಬಾಯಿಂದ ಸಿರಿವಂತ ಸುಶೀಲೆಯು ಅವನಿಗೆ ತೋರಿಸಿದ ಕರುಣೆಯನ್ನು ಕೇಳಿ, ಅವಳನ್ನು ನೂರಾವರ್ತಿ ಹರಸಿದಳು. ಆದರೆ ಸೀತೆ ಬಹಳ ಸೊರಗಿದ್ದಳು. ಅವಳನ್ನು ನೋಡಿ ಮಾಧೂಗೆ ಬಹಳ ವೇದನೆಯಾಯಿತು. ಮರಳಿ ಪಟ್ಟಣಕ್ಕೆ ಹೋಗಬಾರದೆಂದನಿಸಹತ್ತಿತು. ಸೂಟಿ ಇರುವಷ್ಟು ದಿನ, ಅವಳಿಗೆ ನೆರವಾದ. ಆದರೆ ಹೋಗದೆ ಇರಲು ಸೀತೆ ಒಪ್ಪಲಿಲ್ಲ. ಸುಶೀಲೆಯೂ ಶಾಲೆ ಸುರುವಾಗಿದೆ ಎಂದು ಪತ್ರ ಹಾಕಿದ್ದಳು. ಹೀಗಾಗಿ ಮಾಧು ಮತ್ತೆ ಪಟ್ಟಣಕ್ಕೆ ಹೋಗಲೇಬೇಕಾಯಿತು, ಹೋದ.

* * *

ಮಾಧು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತಮ್ಮ ಜಿಲ್ಹೆಗೆ ಮೊದಲನೇಯವನಾಗಿ ಪಾಸಾದ. ಇದನ್ನು ಕಂಡು ಸೀತೆ, ಸುಶೀಲೆಯರಿಗೆ ಹಿಡಿಸಲಾರದಷ್ಟು ಸಂತೋಷ. ಸೀತೆಗಂತೂ, ಎಷ್ಟು ಜನರ ಮುಂದೆ ಹೇಳಿದರೂ ಕಡಿಮೆ. ಎಂಟು ದಿನಗಳ ವರೆಗೆ ಕೇವಲ ಇದರ ವಿಷಯವಾಗಿಯೇ ಮಾತನಾಡುತ್ತಿದ್ದಳು. ಮಾಧುವನ್ನು ಕೇಳದೆ ಸುಶೀಲೆಯು ಯಾವ ಕಾರ್ಯವನ್ನೂ ಮಾಡದಿರುವ ಮಟ್ಟಕ್ಕೆ ಬಂದು ಮುಟ್ಟಿತ್ತು ಅವರಿಬ್ಬರ ಅಗಾಧ ಸಂಬಂಧ.

ಇತ್ತ ಅಶಕ್ತತೆಯ ಮೂಲಕವೂ, ಹೆಚ್ಚಿನ ಕೆಲಸದ ಮೂಲಕವೂ ಸೀತೆಯ ಪ್ರಕೃತಿ ದಿನದಿನಕ್ಕೆ ಕೆಡುತ್ತ ಬಂತು. ತಮ್ಮನ ಅಭ್ಯಾಸಕ್ಕೆ ಆತಂಕವಾಗಬಾರದೆಂದು ಮೊದಲು ತಿಳಿಸದಿದ್ದ ಸೀತೆ ಕೊನೆಗೆ ತಿಳಿಸಲೇ ಬೇಕಾಯಿತು. ಮಾಧು ಪತ್ರ ಓದಿ ಧಾವಿಸಿಬಂದ. ಹಳ್ಳಿಯಲ್ಲಿಯೇ ವೈದ್ಯರಿಂದ ಔಷಧೋಪಚಾರ ಮಾಡಿಸಿದ. ಆದರೆ ಗುಣವಾಗಲಿಲ್ಲ. ಸುಶೀಲೆ ಅವಳನ್ನು ಪಟ್ಟಣಕ್ಕೆ ಕರೆತರಲು ಕೇಳಿಕೊಂಡಳು. ಆದರೆ ಸೀತೆ ಅದಕ್ಕೆ ಒಪ್ಪಲಿಲ್ಲ. ಕೊನೆಗೆ ತನ್ನ ಹಳ್ಳಿಯಲ್ಲಿಯೇ ಮೃತಪಟ್ಟಳು. ಮಾಧೂಗೆ ದಿಕ್ಕು ಕಾಣದಂತಾಯಿತು. ಇನ್ನಾರ ಸಲುವಾಗಿ ಕಲಿಯಬೇಕೆಂದೆನಿಸಹತ್ತಿತು. ಕೊನೆಯವರೆಗೂ ಅಕ್ಕನಿಗೆ ಯಾವ ಸುಖ ಕೊಡಲಿಲ್ಲವೆಂದು ಅವನ ಮನಸ್ಸು ಕಳವಳಪಡುತ್ತಿತ್ತು. ಸುಶೀಲೆ ಈ ವಾರ್ತೆಯನ್ನು ಕೇಳಿ, ಬಂದು ಅವನನ್ನು ಕರೆದುಕೊಂಡು ಹೋದಳು. ಮಾಧೂಗೆ ಅಭ್ಯಾಸ ಮಾಡುವದಕ್ಕೆ ಮನಸ್ಸೆ ಬಾರದಾಯಿತು. ಯಾವಾಗಲೂ ಅವನಿಗೆ ಕಾಣುವದು ಸೀತೆಯ ದೀನ ಮೂರ್ತಿ. ಅವಳು ತನಗಾಗಿ ಪಟ್ಟ ಕಷ್ಟವನ್ನು ನೆನೆದು ಅವನು ಶೋಕಿಸುತ್ತಿದ್ದ.

ದಿನಗಳು ಕಳೆದವು; ದುಃಖವು ಬರಬರುತ್ತ ಕಡಿಮೆಯಾಯಿತು. ತನಗೆ ಸಹಾಯ ಮಾಡುವ ಸುಶೀಲೆಯನ್ನು ಸಂತೋಷಪಡಿಸಬೇಕೆಂದೆನಿಸಹತ್ತಿತು. ಮಾಧು ಮೊದಲಿನಂತಾದ. ಮತ್ತೆ ಓದುವದಕ್ಕೆ ಪ್ರಾರಂಭಿಸಿದ.

ಒಂದು ರಾತ್ರಿ ೧೨ ಗಂಟೆಯ ಸಮಯ. ಪರೀಕ್ಷೆ ಸಮೀಪ ಬಂದದ್ದರಿಂದ ಮಾಧುವಿನ ಕೋಣೆಯಲ್ಲಿ ದೀಪ ಉರಿಯುತ್ತಿತ್ತು. ಪಂಡಿತ ಪದವಿಯನ್ನು ಪಡೆಯಬೇಕೆಂದು ಮಾಧು ಈ ಮೂರು ತಿಂಗಳು ಹಗಲಿರುಳು ಊಟ ನಿದ್ದೆಯ ಪರಿವೆಯಿಲ್ಲದೆ ಓದುತ್ತಿದ್ದ. ಒಮ್ಮೆಲೆ ಚಟ್ಟನೇ ಚೀರಿದ ಸ್ವರ ಕೇಳಿಸಿತು. ಮಾಧು ಬೆಚ್ಚಿಬಿದ್ದ. ಲಗುಬಗೆಯಿಂದ ನಡುವಿನ ಕೋಣೆಗೆ ಓಡಿದ. ಅಲ್ಲಿಯ ದೃಶ್ಯವನ್ನು ಕಂಡು ಬೆರಗಾದ. ಅವನ ತಲೆತಿರುಗಲಾರಂಭಿಸಿತು. ಸುಶೀಲಾ ಮೂರ್ಛೆಹೊಂದಿ ಬಿದ್ದಿದ್ದಳು. ಒಬ್ಬ ತರುಣ ಇಂಗ್ಲೀಷದಲ್ಲಿ ಬಯ್ಯುತ್ತ ಅಲ್ಲಿಂದ ರಭಸದಿಂದ ಹೋಗಿ ಮನೆಯ ಮುಂದೆ ನಿಂತಿರುವ ಕಾರಿನಲ್ಲಿ ಕೂತು ಹೋಗಿಬಿಟ್ಟ. ಅವನ ಬಾಯಿಂದ ವಾಸನೆ ಬರುತ್ತಿತ್ತು. ಕುಡಿದಿದ್ದನೆನ್ನಲು ಸಂಶಯವಿಲ್ಲ. ಮಾಧೂಗೆ ಏನೂ ತೋಚದಾಯಿತು. ಅವನು ಸುಶೀಲೆಯನ್ನು ಎತ್ತಿ ಕೋಣೆಯೊಳಗೆ ಒಯ್ದು ಮಲಗಿಸಿ ಉಪಚರಿಸಿದ. ಅವಳಿಗೆ ಪ್ರಜ್ಞೆ ಬಂದೊಡನೆ ಸುಶೀಲೆ ಮಾಧುವನ್ನು ನೋಡಿ ನಾಚಿದಳು. ಅವಳ ಮುಖ ಕಪ್ಪಿಟ್ಟಿತು. ಮಾಧು ಎದ್ದು ಸಾವಕಾಶವಾಗಿ ಕೋಣೆಗೆ ಹೋದ. ಮುಂದೆ ಅವನಿಗೆ ಅಭ್ಯಾಸ ಮಾಡುವದಾಗಲಿಲ್ಲ. ಇನ್ನು ಇಲ್ಲಿರುವದು ಒಳಿತಲ್ಲವೆಂದು ಅವನಿಗೆ ಅನಿಸಹತ್ತಿತು. ಸೀತೆಯ ನೆನಪು ಬಂತು. ಅವನು ಏನೂ ತಿಳಿಯದೆ ಮನಸೋಕ್ತ ಅತ್ತುಬಿಟ್ಟ.

ಮಾರನೇ ದಿನ ಬೆಳಿಗ್ಗೆ ಎದ್ದು ಮಾಧು ಚಹವನ್ನು ಕೂಡ ಕುಡಿಯದೆ, ಸುಶೀಲೆಯ ಕೋಣೆಗೆ ಹೋದ. ಸುಶೀಲೆ ಚಿಂತಾಕ್ರಾಂತಳಾಗಿ ಕುಳಿತಿದ್ದಳು. ಮಾಧು ಬಂದದ್ದನ್ನು ಕಂಡು ಕುಳಿತುಕೊಳ್ಳಲು ಹೇಳಿದಳು. ಮಾಧು ಕೂತುಕೊಳ್ಳದೆ ಸಾವಕಾಶವಾಗಿ, 'ತಾಯೀ, ಇಷ್ಟುದಿನ ಬಹಳ ಉಪಕಾರ ಮಾಡಿದಿರಿ. ಬಡವನನ್ನು ಎತ್ತಿ ಹಿಡಿದಿರಿ. ಆದರೆ ಇನ್ನು ನಾನು ಇಲ್ಲಿ ಇರಲಾರೆ ದಯವಿಟ್ಟು ಅಪ್ಪಣೆ ಕೊಡೀ' ಎಂದ. ಇದನ್ನು ಕೇಳುತ್ತಿದ್ದಂತೆ ಸುಶೀಲೆಯ ಕಣ್ಣಿಂದ ನೀರು ಸುರಿಯಹತ್ತಿದವು. ಅವಳೆಂದಳು 'ಮಾಧು ನೀನು ಹೀಗೆ ಹೇಳುವಿಯೆಂದು ನಾನು ಈ ಮೊದಲೆ ತಿಳಿದಿದ್ದೆ, ಆದರೆ, ನೀನೂ ಎಲ್ಲರಂತೆ ಮಾಡದೆ ಸ್ವಲ್ಪ ಕೂತು ನನ್ನ ಕರುಣ ಕಥೆಯನ್ನು ಆಲಿಸು ಆ ಮೇಲೆ ನಿನ್ನ ಮನಸ್ಸು ಬಂದಲ್ಲಿಗೆ ಹೋಗು. ನೀನೂ ಸುಶಿಕ್ಷಿತ' ಎಂದಳು. ಅವಳ ಮಾತನ್ನು ಕೇಳಿ ಮಾಧು ಉಪಾಯಗಾಣದೆ ಕುಳಿತುಕೊಂಡ. ಸುಶೀಲೆ ಕಣ್ಣೊರಿಸಿಕೊಂಡು ಹೇಳಹತ್ತಿದಳು.

"ನಾನು ಒಬ್ಬ ಅಗರ್ಭ ಶ್ರೀಮಂತನ ಮಗಳು. ಚಿಕ್ಕವಳಿರುವಾಗಲೇ ತಾಯಿ ತೀರಿಕೊಂಡಿದ್ದರಿಂದ ತಂದೆ ನನ್ನನ್ನು ಬಹಳ ಅಕ್ಕರತೆಯಿಂದ ಜೋಕೆಮಾಡಿದ್ದರು. ನಿನ್ನಂತೆ ಚುರುಕಾದ ನಾನು ಶಾಲೆಯಲ್ಲಿ ಆಟಪಾಠಗಳಲ್ಲಿ ಮುಂದಿದ್ದೆ. ನನ್ನ ಬುದ್ಧಿಗೆ ಮೆಚ್ಚಿ ನನ್ನ ತಂದೆ ನನ್ನನ್ನು ಉಚ್ಚ ಶಿಕ್ಷಣಕ್ಕಾಗಿ ಕಾಲೇಜಕ್ಕೆ ಹಾಕಿದರು. ನಾನೂ ನಿನ್ನಂತೆ ಪರೀಕ್ಷೆಗಳಲ್ಲಿ ಉತ್ತಮ ತರಗತಿಯಲ್ಲಿಯೇ ಪಾಸಾಗುತ್ತ ಬಂದೆ. ನಾನು ಬಿ. ಎ. ದಲ್ಲಿದ್ದಾಗ, ಸುರೇಶ — ನಿನ್ನೆ ನೀನು ನೋಡಿದ ತರುಣ—ನ ಪರಿಚಯವಾಯಿತು. ಅತನೂ, ಸುಶಿಕ್ಷಿತ. ಜಹಾಗೀರದಾರರ ಒಬ್ಬನೇ ಮಗ. ಅತನ ಗುಣಶೀಲಗಳಿಗೆ ಮೆಚ್ಚಿದ ನನ್ನ ತಂದೆ ಅವನೊಡನೆ ನನ್ನ ವಿವಾಹವನ್ನು ಮಾಡಬೇಕೆಂದರು. ಅಂದಿನಿಂದಲೂ ನಮ್ಮಿಬ್ಬರ ಸ್ನೇಹ ಬೆಳೆಯುತ್ತ ಬಂತು. ಆದರೆ ವಿವಾಹವಾಗುವ ಮೊದಲೆ, ಉಚ್ಚ ಶಿಕ್ಷಣಕ್ಕಾಗಿ ಸುರೇಶ ಅಮೇರಿಕೆಗೆ ತೆರಳಿದ. ಬರಬರುತ್ತ ನಮ್ಮ ತಂದೆ ಅಶಕ್ತರಾಗುತ್ತಿದ್ದದ್ದರಿಂದ ಅವನು ಬರುವ ವರೆಗೆ ತಡೆಯದೆ ನನ್ನನ್ನು ನನ್ನ ಮನಸ್ಸಿನ ವಿರುದ್ಧ ಒಬ್ಬ ವರ್ತಕನಿಗೆ ಕೊಟ್ಟು ಲಗ್ನ ಮಾಡಿದರು. ನನ್ನ ದುರ್ದೈವದಿಂದ ನಾನು ಅತ್ತೆಯ ಮನೆಗೆ ಹೋಗುವದರೊಳಗಾಗಿ ನನ್ನ ಪತಿಯಾದವನು ಕಾಲರಾದಿಂದ ಮರಣಹೊಂದಿದ. ಅಚ್ಚುಮೆಚ್ಚಿನಿಂದ ಸಾಕಿದ ಮಗಳ ಸ್ಥಿತಿಯನ್ನು ಕಂಡು ನನ್ನ ತಂದೆ, ಕೃಶರಾಗುತ್ತ ಮುಂದೆ ೨ ವರ್ಷಗಳಲ್ಲಿ ತೀರಿಹೋದರು. ಉಪಾಯವಿಲ್ಲದೆ ನಾನು ಎಲ್ಲ ಕಾರಭಾರವನ್ನು ನೋಡಿಕೊಳ್ಳಬೇಕಾಯಿತು.

"ಮುಂದೆ ೩ ವರ್ಷಗಳ ನಂತರ ಸುರೇಶ ಮರಳಿ ಬಂದ. ಅಷ್ಟರಲ್ಲಿ ಆದ ಅನಾಹುತವನ್ನು ಕಂಡು ಬೆಪ್ಪನಂತಾದ. ಅಂದು ಯಾರನ್ನು ಸುಖಿಯಾಗಿರಿಸಲು ತಾನು ಅಷ್ಟು ಕಷ್ಟಪಟ್ಟಿದ್ದನೊ ಅವಳು ಈಗಾಗಲೇ ದುಃಖಿಯಾಗಿ ನಾಲ್ಕು ವರ್ಷಗಳಾಗಿದ್ದವು. ನನ್ನ ಸ್ಥಿತಿಯನ್ನು ಕಂಡು ಅವನಿಗೆ ವ್ಯಥೆಯಾಯಿತು. ದುಃಖಸಾಗರದಲ್ಲಿ ಮುಳುಗಿ ಹೋದ. ಆ ದುಃಖವನ್ನು ಮರೆಯಲು ಕುಡಿಯುವದಕ್ಕೆ ಪ್ರಾರಂಭಿಸಿದ. ವ್ಯಸನಾಧೀನನಾದ. ಅವನ ಅಧೋಗತಿಯನ್ನು ಕಂಡು ನನಗೆ ಬಹಳ ತಾಪವಾಯಿತು. ನಾನು ಅವನನ್ನು ಸುಧಾರಿಸುವದಕ್ಕೆ ಪ್ರಯತ್ನಿಸಹತ್ತಿದೆ. ಇದನ್ನು ಕಂಡು ಜನರು ನನಗೆ ಹಾಸ್ಯಮಾಡಹತ್ತಿದರು. ಅದರಿಂದಂತೂ ನನಗೆ ಏನೂ ತೋಚದಾಯಿತು ಸುರೇಶನನ್ನು ಒಳ್ಳೆ ಮಾರ್ಗಕ್ಕೆ ಹಚ್ಚುವದೇ ನನ್ನ ಕರ್ತವ್ಯವೆಂದು ತಿಳಿದು ಈ ವರೆಗೂ ಪ್ರಯತ್ನಿಸುತ್ತಿದ್ದೇನೆ. ಜನರ ಗೊಡವೆ ನನಗಿಲ್ಲ. ಒಮ್ಮೆ ಹಚ್ಚಿಕೊಂಡ ಚಟವನ್ನು ಬಿಡಲಾರದೆ ಒದ್ದಾಡುತ್ತಾನೆ. ನಿನ್ನೆ ಕೂಡ ಹಾಗೆಯೇ ಕುಡಿದಿದ್ದ. ಮತ್ತೆ ನಾನು

—೧೬ನೇ ಪುಟಕ್ಕೆ






ಜ್ಯೋತಿಷಿ:–ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ನವಂಬರ ೧೮ ರಿಂದ ೨೪ ರ ವರೆಗೆ

## ಮೇಷ

ನಿಮ್ಮ ಆರೋಗ್ಯ ಸರಿಯಾಗುಳಿಯುವದು. ಆದರೆ ಹೆಂಡತಿಯದು ಅಲ್ಪಸ್ವಲ್ಪ ಕೆಡುವದು. ಮಕ್ಕಳಲ್ಲಿಯೂ ಕೆಲಜನರಿಗೆ ಅಲ್ಪಸ್ವಲ್ಪ ಕ್ಲೇಶ. ವಿಶೇಷತಃ ಅಪಘಾತ ಅಂಜಿಕೆ ಬಹುತರ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಹೆಚ್ಚೇ. ಉದ್ಯೋಗದಲ್ಲಿ ಮಾತ್ರ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಪ್ರತಿಯೊಂದು ವಿಷಯದಲ್ಲಿ ನಿಮ್ಮದೇ ವರ್ಚಸ್ಸು. ಅಲ್ಪಸ್ವಲ್ಪ ಅವಚಿತ ಲಾಭ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಸ್ಪರ್ಧೆ. ಮಿತ್ರತ್ವದಲ್ಲಿ ವಿರೋಧ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಅಶ್ವಿನಿಯು ೧ ನೆ ೩ ನೇ ಭರಣಿಯು ೧ ನೆ ೩ ನೇ ೪ ನೆ ಚರಣಗಳಿಗೆ ತೊಂದರೆ ಕಡಮೆ. ತಾ. ೧೮, ೨೧, ೨೨ ಅನುಕೂಲ.

## ವೃಷಭ

ಪ್ರಕೃತಿ ಮತ್ತು ಪ್ರಾಪಂಚಿಕಸುಖ ಬಹಳ ಉತ್ತಮ. ಸಂಗ್ರಹದಲ್ಲಿ ಹೆಚ್ಚಳ. ಆದರೆ ಆಪ್ತರು ಇಲ್ಲವೆ ಆಶ್ರಿತ ವರ್ಗದವರಿಂದ ಆದರಲ್ಲಿ ಬಹಳ ಅಡ್ಡಚಣಿ ತರುವ ಪ್ರಯತ್ನ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಆದರೆ ಲಾಭ ಮತ್ತು ಪ್ರತಿಷ್ಠೆ ಬಹಳ ಕಡಮೆ. ಮಿತ್ರತ್ವದಲ್ಲಿ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಬಹಳ ಕೆಲಸಗಳಲ್ಲಿ ತೊಂದರೆಯುಂಟಾಗುವದರಿಂದ ಮನಸ್ಸು ರಂಜಿತವಾಗುವದು. ಪ್ರವಾಸ ಮತ್ತು ಪತ್ರವ್ಯವಹಾರವು ಭೆಟ್ಟಿಗಿಂತ ಅನುಕೂಲ. ರೋಹಿಣಿಗೆ ತೊಂದರೆ ಕಡಮೆ. ತಾ, ೧೯, ೨೦, ೨೪, ಅನುಕೂಲ.

## ಮಿಥುನ

ಪ್ರಕೃತಿಗೆ ಕಿರುಕಳ ಕ್ಲೇಶ. ಯಾರಿಗಾದರೂ ನಾಲ್ಕು ಹಿತದ ಮಾತುಗಳನ್ನು ಹೇಳಹೋದರೆ ಅವರೆ ನಿಮ್ಮ ಮೇಲೆ ತಿರುಗಿ ಸಿಟ್ಟಿಗೇಳುವರು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಅನುಕೂಲ. ಆದರೆ ಲಾಭ ಬಹಳ ಕಡಮೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿಯೂ ಬಹಳ ಅನುಕೂಲತೆ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಆರಿದ್ರಗೆ ತೊಂದರೆ ಕಡಮೆ. ತಾ. ೧೮, ೨೧, ೨೨ ಅನುಕೂಲ.

## ಕರ್ಕ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಮಕ್ಕಳಲ್ಲಿ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ. ಆದರೆ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆಸ್ತಿಯಲ್ಲಿ ಕೆಲ ಹೊಸ ಸುಧಾರಣೆಗಳನ್ನು ಮಾಡುವದರಲ್ಲಿ ವೆಚ್ಚ. ಮಿತ್ರ ಸುಖ ಉತ್ತಮ. ಆದರೆ ಅದರಲ್ಲಿ ಕೆಲವೊಂದು ವಿಪರೀತ ಆಪತ್ತಿಯಲ್ಲಿ ಬೀಳುವ ಸಂಭವ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ವಿಜಯ ಆದರೆ ಶತ್ರುಗಳು ಮನೆ ಮುರುಕತನದ ಪೆಚು ಹಾಕುವರು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಪುಷ್ಯಕ್ಕೆ ಹೆಚ್ಚು ಅನುಕೂಲ. ತಾ. ೧೮, ೧೯, ೨೦, ೨೪, ಅನುಕೂಲ.

## ಸಿಂಹ

ನಿಮ್ಮ ಪ್ರಕೃತ್ತಿ ಸಾಧಾರಣ ಆದರೆ ಹೆಂಡತಿಯ ಆರೋಗ್ಯದಲ್ಲಿ ಕುರಕುರಿ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಸಾಧಾರಣ ಅನುಕೂಲ. ಆದರೆ ಅವಾಸ್ತವ ವೆಚ್ಚ. ಮಿತ್ರತ್ವದಲ್ಲಿ ವಿರೋಧ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಮಘಾದ ೧ ನೆ ಮತ್ತು ೩ ನೆ ಹಾಗೂ ಪೂರ್ವಾದ ೧ ನೇ ೩ ನೇ ಮತ್ತು ೪ ನೇ ಚರಣಗಳಿಗೆ ತೊಂದರೆ ಕಡಮೆ. ತಾ. ೧೯, ೨೦, ೨೧, ೨೨ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ ಆದರೆ ಹೆಂಡತಿಯ ಮನಃಸ್ವಾಸ್ಥ್ಯ ಮಾತ್ರ ಕಡಮೆ ಉದ್ಯೋಗದಲ್ಲಿ ಪ್ರತಿಷ್ಠೆ ಕಡಮೆ. ಆದರೆ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ವೆಚ್ಚವೂ ಭಾರದ್ದು. ಸ್ಥಾವರದಲ್ಲಿ ಅನುಕೂಲ ಘಟನೆಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ, ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಅನುಕೂಲ, ಹಸ್ತಾಕ್ಕೆ ತೊಂದರೆ ಕಡಮೆ. ತಾ. ೨೧, ೨೨, ೨೩, ೨೪ ಅನುಕೂಲ.

## ತುಲಾ

ಪ್ರಕೃತಿ ಅನುಕೂಲ. ಆದರೆ ಪ್ರಾಪಂಚಿಕ ಸುಖದಲ್ಲಿ ಮನೋಭಂಗವಾಗುವಂಥ ಕೆಲ ಸಂಗತಿಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಸಾಧಾರಣ ಅನುಕೂಲ. ಆದರೆ ಪ್ರತಿಯೊಂದು ಕೆಲಸದಲ್ಲಿ ಸಹಾಯಕರು ವೈಗಳ್ಯತನ ಮಾಡುವರು. ಇದರಿಂದ ಸ್ವಂತದ ಮೇಲೆಯೆ ಎಲ್ಲ ಹೊಣೆಗಾರಿಕೆ ಬೀಳುವದು. ಮತ್ತು ಆಯಾಸವಾಗುವಂತೆ ಶ್ರಮ. ಆಸ್ತಿಯಲ್ಲಿ ಹೆಚ್ಚು. ಸ್ವಲ್ಪ ಅವಚಿತ ಲಾಭ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ ಪ್ರವಾಸ ತೊಂದರೆಯದು. ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಸ್ವಾತಿಗೆ ತೊಂದರೆ ಕಡಮೆ. ತಾ. ೨೧, ೨೨, ೨೩, ೨೪ ಅನುಕೂಲ.

## ವೃಶ್ಚಿಕ

ಆರೋಗ್ಯ ಮತ್ತು ಸ್ತ್ರೀ ಸುಖ ಅನುಕೂಲ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ವಿಪರೀತ. ಮತ್ತು ಅದರ ಬಗ್ಗೆ ಹೆಂಡತಿ ಸಹಿತ ಎಲ್ಲರೊಡನೆ ಮತಭೇದ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ಇಚ್ಛಿತ ಕಾರ್ಯ ಸಾಧಿಸುವಲ್ಲಿ ವೆಚ್ಚ. ಮಿತ್ರ ಸುಖ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಕೆಲ ದುರ್ಲಭ ಸಂಗತಿಗಳು ಸಾಹಸದಿಂದ ಸಾಧ್ಯವಾಗುವದರಿಂದ ಎಲ್ಲರ ಮೇಲೆಯೂ ಛಾಪು ಕೂಡುವದು. ಪ್ರವಾಸಾದಿ ಕೆಲಸ ಹಿತಕರ. ಪ್ರವಾಸಾದಿ ಕೆಲಸ ಹಿತಕರ. ಅನುರಾಧೆಗೆ ಹೆಚ್ಚು ಯಶಸ್ಸು. ತಾ. ೧೮, ೧೯, ೨೦, ೨೪ ಅನುಕೂಲ.

## ಧನು

ನಿಮ್ಮ ಆರೋಗ್ಯ ಅನುಕೂಲ. ಆದರೆ ಹೆಂಡತಿಯ ಶಾರೀರಿಕ ಇಲ್ಲವೆ ಮಾನಸಿಕ ತೊಂದರೆ ಬಹಳ. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ತೊಂದರೆ ವಿಪರೀತ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಚಿಂತೆ ಹತ್ತುವಷ್ಟು ಮಂದ. ಮತ್ತು ಖರ್ಚೂ ಅನಾವಶ್ಯ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಮತ್ತು ಯಾವದೊಂದು ಪೇಚು ಮೈಮೇಲೆ ಬೀಳುವ ಅಂಜಿಕೆ. ಪ್ರವಾಸ ಮೊದಲಾದ ಕೆಲಸಗಳು ಕಠಿನ ಮಿತ್ರರೂ ಶತ್ರುಗಳಂತೆ ತಿರುಗುವ ಅಂಜಿಕೆ. ಆದರೆ ಮೂಲಾದ ೧ ನೇ ಮತ್ತು ೩ ನೇ ಮತ್ತು ಪೂರ್ವಾಷಾಢಾದ ೧ ನೇ ೩ ನೇ ೪ ನೇ ಚರಣಗಳಿಗೆ ತೊಂದರೆ ಕಡಮೆ. ತಾ. ೨೧, ೨೨, ೨೩ ಸ್ವಲ್ಪ ಅನುಕೂಲ

## ಮಕರ

ನಿಮ್ಮ ಪ್ರಕೃತಿಗೆ ಅನುಕೂಲ. ಆದರೆ ಹೆಂಡತಿಯದು ಬಹಳ ಕೆಡುವ ಸಂಭವ. ಬಂಧು ವರ್ಗದವರಲ್ಲಿ ಕ್ಲೇಶ. ಮಕ್ಕಳಲ್ಲಿ ಲೋಕಾಪವಾದ ಬೇಸುವಂತೆ ಕೆಲ ಅಪಕೃತ್ಯಗಳು ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಮತ್ತು ತದ್ವಿಷಯಕ ಕೆಲಸಗಳಲ್ಲಿ ಅಲ್ಪಾಯಾಸದಿಂದ ಯಶಸ್ಸು. ಸಿಕ್ಕುವಂತಹ ದೈವೀಕೃಪೆಯ ಸಾಕ್ಷಾತ್ಕಾರ. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಡಂಬಡಿಕೆಯ ಸಂಭವ. ಅವಶ್ಯಕ್ಕಿಂತ ಹೆಚ್ಚು ಅನುಕೂಲತೆ. ತಾ. ೧೯, ೨೧, ೨೨, ೨೪ ಅನುಕೂಲ.

## ಕುಂಭ

ಪ್ರಕೃತಿ ಸಾಧಾರಣವೆ. ಆದರೆ ಸ್ತ್ರೀ ಸುಖ ಮತ್ತು ಉಭಯತರಲ್ಲಿ ಒಮ್ಮತ. ಮಕ್ಕಳಲ್ಲಿ ಬಹಳ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಅಸಾಮಾನ್ಯ ಜನರ ಭೆಟ್ಟಿಯು ಮತ್ತು ಅವರಿಂದ ಸ್ತುತಿಸ್ತೋತ್ರ ಕೇಳುವ ಅಭಿನವ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸಿನ ಅನುಭವ. ಪ್ರವಾಸಾದಿ ಕೆಲಸ ಹಿತಕರ. ಶತತಾರಿಕೆಗೆ ವಿಶೇಷ ಅನುಕೂಲ. ತಾ. ೨೧, ೨೨, ೨೩, ೨೪ ಅನುಕೂಲ

## ಮೀನ

ಪ್ರಕೃತಿ ಸಾಧಾರಣವೆ. ಆದರೆ ಪ್ರಾಪಂಚಿಕ ಸುಖ ಉತ್ತಮ. ಮಕ್ಕಳಲ್ಲಿ ಒಬ್ಬರಿಂದ ಲೌಕಿಕ. ಆದರೆ ಎರಡನೆಯ ಕಡೆಯಿಂದ ನಾಚಿಕೆ ಉಂಟಾಗುವಂಥ ಕೆಲ ಕೃತ್ಯಗಳು. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಪ್ರತಿಷ್ಠೆಗಿಂತ ಹೆಚ್ಚು ಅನುಕೂಲ. ಪ್ರವಾಸ ಸುಖಕರ ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ಅನುಕೂಲ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು ಉತ್ತರಾಭಾದ್ರಪದಕ್ಕೆ ತೊಂದರೆ ಕಡಮೆ. ತಾ. ೧೯, ೨೦, ೨೪ ಅನುಕೂಲ.

## ಪುಸ್ತಕ ಮತ್ತು ವಿಮರ್ಶೆ

(೨ನೇ ಪುಟದಿಂದ)

ಕನ್ನಡ ದೋಷಗಳಿಂದ ತುಂಬಿದೆ. ಅಧ್ಯಾಯ "ಅಧ್ಯಯ" ಎಂದೇ ಬರೆಯಲ್ಪಟ್ಟಿದೆ. ಎಷ್ಟೋ ಕಡೆಗಳಲ್ಲಿ ವಾಕ್ಯಗಳು ಅರ್ಥವಾಗದಷ್ಟು ಮಟ್ಟಿಗೆ ಪೂರ್ವಾಪರ ಸಂಬಂಧ ತಪ್ಪಿಹೋಗಿದೆ. ಕುರಾಣದಂಥ ಅಲೌಕಿಕ ಗ್ರಂಥದ ಅನುವಾದ ಎಷ್ಟು ಕಠಿಣ, ಅದರಲ್ಲಿಯೂ ಕನ್ನಡ ಭಾಷೆಯ ಮೇಲೆ ಪ್ರಭುತ್ವಗಳಿಸಿ ಅರಬ್ಬಿಯಿಂದ ಕನ್ನಡಕ್ಕೆ ಯಶಸ್ವಿಯಾಗಿ ಪರಿವರ್ತಿಸುವದು ಉರ್ದೂ ಅರಬ್ಬಿಗಳಲ್ಲಿ ಕೈಯಾಡಿಸಿರುವ ಮುಸ್ಲಿಂ ಲೇಖಕರಿಗೆಎಷ್ಟು ಬಿಗಿಯಾದುದು, ಎಂದು ನಮಗೆ ಗೊತ್ತು. ಆದರೂ ಹಿಂದೂ ವಿದ್ವಾಂಸರ ನೆರವು ಗಳಿಸಿ ಲೇಖಕರು ಇದರಲ್ಲಿ ಸುಧಾರಣೆಗಳನ್ನು ಮಾಡಿದರ್ದೆ ಇದರ ಯೋಗ್ಯತೆಎಷ್ಟೋ ಬೆಳೆಯುತ್ತಿತ್ತು. ಇದಲ್ಲದೆ ಪ್ರತಿವಾಕ್ಯದ ಶಬ್ದಚ್ಛೇದ ಮತ್ತು ವ್ಯಾಖ್ಯಾನಮಾಡುವಮೊದಲು ಆ ವಾಕ್ಯದ ಸಾಧಾರಣ ಅರ್ಥವನ್ನು ಸರಳವಾಗಿ ಕೊಟ್ಟು ಆ ಮೇಲೆ ಶಬ್ದಾರ್ಥ ಮತ್ತು ಧ್ವನಿತ ಗುಂಫಿತ ಅರ್ಥಗಳ ವಿವರಣೆಗೆ ಹೊರಟಿದ್ದರೆ ಸಾಮಾನ್ಯ ಓದುಗನಿಗೆ ಹೆಚ್ಚು ಉಪಕಾರವಾಗುತ್ತಿತ್ತು. ಮೂಲ ಗ್ರಂಥದ ಮಹತ್ವ ಮತ್ತು ರಹಸ್ಯ ಪೂರ್ಣವಾದ ಅದರ ವಾಕ್ಯಗಳು ಓದುವವರಿಗೆ ಸರಿಯಾಗಿ ತಿಳಿಯುವ ಅವಶ್ಯಕತೆ ಇವುಗಳನ್ನು ಅನುಲಕ್ಷಿಸಿ ಪ್ರಸ್ತುತಲೇಖಕರಿಗೆ ಸೌಹಾರ್ದದಿಂದ ಈ ಸೂಚನೆಗಳನ್ನು ಕೊಡಲಾಗಿದೆ. ಮುಂದಿನ ಮುದ್ರಣಗಳಲ್ಲಿ ಇದು ಆಮೂಲಾಗ್ರ ಪರಿಶೋಧಿಸಲ್ಪಡಲೆಂದು ಬಯಸುವೆವು.

### ವಿಶೇಷ ಸಂಚಿಕೆಗಳು

**ಉಷಾ (ದಸರಾ ಸಂಚಿಕೆ)**
ಕ್ರೌನ್ ೧/೪—೧೪೮ ಪುಟ, ಬೆಲೆ ರೂ. ೧— ಪ್ರಕಾಶಕರು ಎಸ್ ನಂಜಪ್ಪ, ೫೩, ಗಾಂಧಿ ನಗರ, ಬೆಂಗಳೂರು.

**ಸುಗ್ಗಿಯ ಮೈಸೂರು (ದೀಪಾವಳಿಯ ಸಂಚಿಕೆ)**
ಪುಟ ೬೪. ಬೆಲೆ ೦—೮—೦ ಪ್ರಕಾಶಕರು ಆರ್. ಕೆ. ಅಯ್ಯಂಗಾರ, ವಿಶ್ವೇಶ್ವರ ಪುರಂ ಬೆಂಗಳೂರು ನಗರ.

**ಪ್ರಜಾಮತ (ದೀಪಾವಳಿ ಸಂಚಿಕೆ)**
ಪುಟ ೨೫೫ ಬೆಲೆಃ ರೂ. ೧/೪/- ಪ್ರಕಾಶಕರು ಪ್ರಜಾಮತ ಪಾವರ ಪ್ರೆಸ್, ೨೮—ಎ ಲಾಲ ಬಾಗ ರೋಡ ಬೆಂಗಳೂರು ನಗರ.

**ವಾಹಿನಿ ಬೆಂಗಳೂರು ( ಜನ್ಮ ದಿನ ಸಂಚಿಕೆ)**
ಬೆಲೆ ರೂ. ೧/—

ಈ ನಾಲ್ಕು ವಿಶೇಷ ಸಂಚಿಕೆಗಳು ಅನೇಕ ಪ್ರಮುಖ ಲೇಖಕರ, ಲೇಖನ, ಕವಿತೆ, ಕತೆ ಮೊದಲಾದವುಗಳಿಂದ ಮತ್ತು ತ್ರಿವರ್ಣ ಚಿತ್ರಗಳಿಂದ ಸುಂದರವಾಗಿವೆ. ವಾಹಿನಿ ವಿಶೇಷ ಸಂಚಿಕೆಯಲ್ಲಿ ವರ್ಷದ ಸಾಹಿತ್ಯದ ಬೆಳೆಯನ್ನು ವಿವಿಧ ಭಾಗಗಳಲ್ಲಿ ವಿಭಾಗಿಸಿ ವಿವೇಚಿಸಿದ ಉಪಯುಕ್ತ ಲೇಖನವೂ ಪ್ರಜಾಮತ ವಿಶೇಷ ಸಂಚಿಕೆಯಲ್ಲಿ ರಾಜಾ ರವಿವರ್ಮರ ರಾಮಸೀತಾ ಶೂರ್ಪನಖಿ ಮತ್ತು ಗೋಪಿಯವರ ಮಹಾತ್ಮಾ ಗಾಂಧಿ ತ್ರಿವರ್ಣ ಚಿತ್ರಗಳೂ ವಿಶೇಷ ಉಲ್ಲೇಖಾರ್ಹವಾಗಿವೆ. ಈ ಸಹಯೋಗಿಗಳಿಗೆ ನಮ್ಮ ಅಭಿನಂದನೆಗಳು.

## ವಾರದ ಕತೆ

(೧೫ನೇ ಪುಟದಿಂದ)

ಅದರ ಬಗ್ಗೆ ಕೇಳಿದರೆ, ಪುನಃ ಕೋಪಿಸಿಕೊಂಡು ಬಯ್ಯುತ್ತ ಹೋದ. ಮಾಧು, ಎಷ್ಟಾದರೂ ಅವನು ನನ್ನ ಪ್ರಿಯನಲ್ಲವೆ ? ನನಗಾಗಿ ಅವನ ಜೀವನ ಹಾಳಾಗಲಿಲ್ಲವೇ ? ಜನರು ಏನೆಂದರೂ ಈಗ ನಾನು ಮಾಡುತ್ತಿರುವದು ಅನ್ಯಾಯವೆ ? ಅಪರಾಧವೆ ? ಮಾಧು, ನೀನೇ ಹೇಳು, ತಂದೆ ತೀರಿದಂದಿನಿಂದ ಈ ವರೆಗೆ ಅಂತಃಕರಣವನ್ನೇ ಕಾಣದ ನಾನು ನಿನ್ನಲ್ಲಿ ಬಂಧುಪ್ರೇಮವನ್ನಿಟ್ಟು ಬೆಳೆಸಿದೆ. ತಮ್ಮನಂತಿರುವ ನೀನಾದರೂ ವಿಚಾರಿಸಿ ಹೇಳು. ನೀನೂ ಸುಶಿಕ್ಷಿತ. ಎಲ್ಲ ಜನರಂತೆ ನೀನು ನಿನ್ನ ಅಕ್ಕನನ್ನು ತ್ಯಜಿಸುವಿಯಾ?" ಎಂದು ಕಣ್ಣೀರೊರಿಸಿಕೊಳ್ಳಹತ್ತಿದಳು.

ಎಲ್ಲವನ್ನೂ ಏಕಚಿತ್ತದಿಂದ ಕೇಳುತ್ತಿದ್ದ ಮಾಧು ಸುಮ್ಮನೆ ಕುಳಿತು ಬಿಟ್ಟ. ಅವನ ಮನಸು ಸೀತೆ-ಸುಶೀಲೆಯರನ್ನು ತುಲನೆ ಮಾಡುವದರಲ್ಲಿತ್ತು. ಒಬ್ಬಳು, ಬಡವಿಯಾದರೆ, ಇನ್ನೊಬ್ಬಳು ಶ್ರೀಮಂತಳಿದ್ದರೂ ಸಿರಿವಂತಿಕೆಯನು ಉಪಭೋಗಿಸಲಾರದವಳು. ಒಬ್ಬಳು ಪತಿಯ ಮುಖವನ್ನೇ ಕಾಣದಿದ್ದರೆ, ಇನ್ನೊಬ್ಬಳು, ಕಂಡ ಪತಿಯನ್ನು ಕಳೆದುಕೊಂಡು, ಅವನ ಉದ್ಧಾರಕ್ಕಾಗಿ ಜನರಲ್ಲಿ ಹಾಸ್ಯಾಸ್ಪದಳಾದವಳು. ಹೀಗೆ ವಿಚಾರಿಸುತ್ತ ಕುಳಿತ ಮಾಧು ಏನೂ ಹೇಳದೆ ಎದ್ದು ಹೋದ.

ಮಾಧು ಸುಶೀಲೆಯ ಮನೆಯನ್ನು ಬಿಟ್ಟು ಹೋಗಲಿಲ್ಲ. ಮೊದಲಿಗಿಂತಲೂ ಈಗ ಅವಳಲ್ಲಿ ಅವನಿಗೆ ಮಮತೆ ಹೆಚ್ಚು. ಅವನ ಗೆಳೆಯರು ಅವನಿಗೆ ಎಷ್ಟು ಹಾಸ್ಯಮಾಡಿದರೂ ಅವನು ಲಕ್ಷ್ಯಕ್ಕೆ ತರುವದಿಲ್ಲ. ದುಃಖಿಯಾದ ಸುಶೀಲೆಯನ್ನು ಸಂತೋಷಗೊಳಿಸಲು ಆದಷ್ಟು ಯತ್ನಿಸುತ್ತಾನೆ. ಈಗ ಅವನಿಗೆ ಸೀತೆಯ ಸ್ಥಳದಲ್ಲಿ ಸುಶೀಲೆ.



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು.